ಶ್ರೀ ಶಂಕರಾಚಾರ್ಯರಿಂದ ರಚಿತವಾದ

# ಗೀತಸಪ್ತಕ

(ಕನ್ನಡ ಅನುವಾದದೊಡನೆ)



ಅನು : ವಿದ್ವಾನ್ ಎನ್. ರಂಗನಾಥಶರ್ಮಾ

ಶ್ರೀ ಶಂಕರಾಚಾರ್ಯರಿಂದ ರಚಿತವಾದ

# ಗೀತಸಪ್ತಕ

(ಕನ್ನಡ ಅನುವಾದದೊಡನೆ)



ಅನುವಾದಕರು

ವಿದ್ವಾನ್ ಎನ್. ರಂಗನಾಥಶರ್ಮಾ

Sri Shankaracharya Virachita Geethasapthaka : seven stotras of Shankaracharya with Kannada translation by Vidwan N. Ranganatha Sharma.



Pages : 105 + VI

Price : Rs. 40/-

Copies : 1500

First Edition : May 2007

Published by : Shri. Shankaraseva Samithi (R)
Siddapur (Uttara Kannada )
PIN : 581355
Ph : 08389 - 293293, 230293

Printed at : SPAN PRINT
Bangalore - 560 070.
Ph . 080- 26718831, 26719569,
Fax 26715946
Email spanprint@indiatimes.com

# ಪ್ರಸ್ತಾವನೆ

ಶ್ರೀ ಶಂಕರಾಚಾರ್ಯರು ಈ ಭಾರತ ದೇಶವು ಕಂಡ ಶ್ರೇಷ್ಠ ವಿದ್ವಾಂಸರಲ್ಲಿ ಅಗ್ರಗಣ್ಯರು. ವೇದ ಶಾಸ್ತ್ರಗಳಲ್ಲಿ ಅಸಾಧಾರಣವಾದ ಪಾಂಡಿತ್ಯವನ್ನು ಗಳಿಸಿದ ಆಚಾರ್ಯರು ವೈದಿಕ ಧರ್ಮದ ರಕ್ಷಣೆಗಾಗಿ ಮಾಡಿದ ಪ್ರಯತ್ನವೂ ಅಸದೃಶವಾದದ್ದು. ಆ ಕಾಲದಲ್ಲಿ ದೇಶದ ತುಂಬ ಹರಡಿಕೊಂಡಿದ್ದ ವೇದವಿರುದ್ಧ ಮತಗಳೆಲ್ಲವನ್ನೂ ಪ್ರಬಲ ಯುಕ್ತಿಗಳಿಂದ ಖಂಡಿಸಿ ವೇದಗಳ ಶ್ರೇಷ್ಠತೆಯನ್ನು ಎತ್ತಿ ಹಿಡಿದರು. ಈ ಉದ್ದೇಶದಿಂದ ಭರತಖಂಡವನ್ನೆಲ್ಲಾ ಕಾಲ್ನಡಿಗೆಯಿಂದ ಸುತ್ತಿದರು. ಹಲವಾರು ಉದ್ದಾಮ ಕೃತಿಗಳನ್ನು ರಚಿಸಿ ಭಾರತೀಯರು ಎಂದೆಂದಿಗೂ ಮರೆಯಲಾಗದಂತೆ ವೇದೋಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಅದ್ವೈತ ಸಿದ್ಧಾಂತವನ್ನು ಸ್ಥಿರಗೊಳಿಸಿದರು.

ವಿಶೇಷವಾಗಿ ಉಪನಿಷತ್ತುಗಳು ಎತ್ತಿ ಹಿಡಿದಿರುವ ಅದ್ವೈತ ದರ್ಶನವು ಯಾವ ಮತಕ್ಕೂ ವಿರುದ್ಧವಲ್ಲವೆಂದು, ಸರ್ವಧರ್ಮಸಮನ್ವಯವು ಇದರಿಂದಲೇ ಆಗುವುದೆಂದು ತೋರಿಸಿ ಕೊಟ್ಟರು. ಜಗತ್ತಿನಲ್ಲಿರುವ ಸಕಲ ಮತಗಳೂ ಅದ್ವೈತ ಶಿಖರವನ್ನು ಏರುವ ಮೆಟ್ಟಿಲುಗಳೆಂದೂ ಪರಮ ಶ್ರೇಯಸ್ಸಾದ ಮೋಕ್ಷವು ಮಾತ್ರ ಅದ್ವೈತ ಬ್ರಹ್ಮ ದರ್ಶನದಿಂದಲೇ ಎಂಬುದೂ ಶ್ರೀ ಶಂಕರಾಚಾರ್ಯರ ಸಿದ್ಧಾಂತವಾಗಿದೆ.

ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ- ಇವುಗಳಿಗೆ ಪ್ರಸ್ಥಾನತ್ರಯವೆಂದು ಹೆಸರು. ಇವುಗಳಿಗೆ ಆಚಾರ್ಯರು ವಿಸ್ತಾರವಾದ ಭಾಷ್ಯಗಳನ್ನು ರಚಿಸಿದ್ದಾರೆ. ಇವುಗಳಲ್ಲದೆ ವಿವೇಕ ಚೂಡಾಮಣಿ, ಉಪದೇಶಸಾಹಸ್ರಿ – ಮುಂತಾದ ಪ್ರಕರಣ ಗ್ರಂಥಗಳನ್ನೂ, ಭಕ್ತಿಪೂರ್ಣವಾದ ಅನೇಕ ಸ್ತೋತ್ರ ಗ್ರಂಥಗಳನ್ನೂ ವಿರಚಿಸಿದ್ದಾರೆ. ಶ್ರೀ ಶಂಕರರು ಅದ್ವೈತಿಗಳಾದರೂ ಪರಮ ದೈವಭಕ್ತರು. ಆತ್ಮಜ್ಞಾನಕ್ಕೆ ಭಕ್ತಿಯೇ ಸರ್ವೋತ್ತಮ ಸಾಧನವೆಂದು ನಂಬಿದವರು.

ಆಚಾರ್ಯರು ಕೇರಳದಲ್ಲಿರುವ ಕಾಲಟಿಯೆಂಬ ಗ್ರಾಮದಲ್ಲಿ ಜನ್ಮವನ್ನು ತಳೆದರು. ಇವರ ತಂದೆ ಶಿವಗುರು. ತಾಯಿ ಆರ್ಯಾಂಬೆ. ದೈವಭಕ್ತರಾದ ಈ ದಂಪತಿಗಳ ಪುತ್ರರಾಗಿ ಜನಿಸಿದ ಶ್ರೀ ಶಂಕರರು ಶಂಕರನಾದ ಪರಮೇಶ್ವರನ ಅವತಾರವೆಂದು ಭಕ್ತಜನರಿಗೆ ದೃಢವಾದ ನಂಬಿಕೆ ಇದೆ. ಬಾಲ ಸನ್ಯಾಸಿಗಳಾಗಿದ್ದ ಇವರ ಜೀವಿತಕಾಲ ಮೂವತ್ತೆರಡು ವರ್ಷಗಳು ಮಾತ್ರ. ಇಷ್ಟು ಅಲ್ಪ ಕಾಲದಲ್ಲಿ ಅವರು ಸಾಧಿಸಿದ ಮಹಾ ಕಾರ್ಯಗಳು ಆಶ್ಚರ್ಯವನ್ನುಂಟುಮಾಡುತ್ತವೆ. ಅವರಿದ್ದ ಕಾಲವು ಕ್ರಿ.ಶ. 8ನೆ ಶತಮಾನದ ಆದಿ ಭಾಗದಲ್ಲೆಂದು ಇತಿಹಾಸತಜ್ಞರ ಅಭಿಪ್ರಾಯವಾಗಿದೆ.

ಈ ಪುಸ್ತಕದಲ್ಲಿ ಶ್ರೀ ಶಂಕರಾಚಾರ್ಯರು ರಚಿಸಿದ ಕೆಲವು ಸ್ತೋತ್ರಗಳನ್ನು ಅರ್ಥಸಹಿತವಾಗಿ ಪ್ರಕಟಿಸಲಾಗಿದೆ. ಪ್ರತಿಯೊಬ್ಬರೂ ಈ ಸ್ತೋತ್ರಗಳನ್ನು

ಕಂಠಪಾಠಮಾಡಿ ಪ್ರತಿದಿನವೂ ಪಠಿಸುತ್ತಿರುವುದು ಶ್ರೇಯೋ ಮಾರ್ಗವಾಗಿದೆ.

ಈ ಸ್ತೋತ್ರಗಳಲ್ಲಿ ದಶಶ್ಲೋಕಿಯು ಅಹಂಬ್ರಹ್ಮಾಸ್ಮಿ ಎಂಬ ಅದ್ವೈತ ದರ್ಶನವನ್ನು ಪ್ರತಿಪಾದಿಸುತ್ತದೆ. ಶ್ರೀ ದಕ್ಷಿಣಾಮೂರ್ತಿ ಸ್ತೋತ್ರದಲ್ಲಿ ವೇದಾಂತ ಸಿದ್ಧಾಂತದೊಡನೆ ಭಕ್ತಿಯೂ ನೆಲಸಿದೆ. ಉಳಿದವುಗಳಲ್ಲಿ ಭಕ್ತಿ ಮಾರ್ಗವೂ ಇದೆ, ಹಿತೋಪದೇಶವೂ ಇದೆ. ಇವುಗಳಲ್ಲಿ ದಶಶ್ಲೋಕಿಯು ಹರಿಹರ ಪುರದ ಶ್ರೀ ಮಠದಿಂದ ಪ್ರಕಟವಾಗುವ 'ಸ್ವಯಂ ಪ್ರಕಾಶ'ವೆಂಬ ಮಾಸಪತ್ರಿಕೆಯಲ್ಲಿಯೂ ಶ್ರೀ ದಕ್ಷಿಣಾಮೂರ್ತಿ ಸ್ತೋತ್ರವು ಸಿದ್ದಾಪುರದ ದೊಡ್ಮನೆ ಗಣೇಶ ಹೆಗಡೆಯವರ ನೇತೃತ್ವದಲ್ಲಿ ಪ್ರಕಟವಾಗುವ 'ಅನುಸಂಧಾನ' ಪತ್ರಿಕೆಗಳಲ್ಲಿಯೂ ಅರ್ಥಸಹಿತವಾಗಿ ಪ್ರಕಾಶಿತವಾಗಿದ್ದವು. ಅವೆರಡನ್ನು ನಾನು ಅರ್ಥಸಹಿತವಾಗಿ ಲೇಖನಗಳ ರೂಪದಲ್ಲಿ ಬರೆದಿದ್ದೆನು.

ಶ್ರೀ ಶಂಕರಾಚಾರ್ಯರಿಂದ ರಚಿತವಾದ ಇನ್ನೂ ಕೆಲವು ಸ್ತೋತ್ರಗಳನ್ನು ಇವುಗಳೊಡನೆ ಸೇರಿಸಿ ಪುಸ್ತಕರೂಪವಾಗಿ ಪ್ರಕಟಿಸಿದರೆ ಆಸ್ತಿಕ ಭಕ್ತ ಜನರಿಗೆ ತುಂಬ ಉಪಯುಕ್ತವಾದೀತೆಂಬ ಇಚ್ಛೆ ನನಗೆ ಉಂಟಾಯಿತು. ಈ ಸಮಯದಲ್ಲಿ ದೊಡ್ಮನೆ ಗಣೇಶ ಹೆಗಡೆಯವರ ಸುಪುತ್ರರಾದ ಶ್ರೀಮಾನ್ ವಿಜಯ ಹೆಗಡೆಯವರು ಸದರಿ ಗ್ರಂಥವನ್ನು ತಾವೇ ಪ್ರಕಟಿಸುವುದಾಗಿಯೂ ಇನ್ನು ಕೆಲವು ಉಪಯುಕ್ತ ಸ್ತೋತ್ರಗಳನ್ನು ಅರ್ಥಸಹಿತವಾಗಿ ಬರೆದು ಕೊಡಬೇಕೆಂದೂ ನನಗೆ ಹೇಳಿದರು. ಅವರ ಅಪೇಕ್ಷೆಯಂತೆ ಈ ಚಿಕ್ಕ ಪುಸ್ತಕವೂ ಸಿದ್ಧವಾಯಿತು.

ಶ್ರೀ ದೊಡ್ಮನೆ ಗಣೇಶ ಹೆಗಡೆಯವರು ಹೇಗೆ ದೊಡ್ಡಮನೆಯವರೋ ಹಾಗೆಯೇ ದೊಡ್ಡ ಮನದವರು. ಆಸ್ತಿಕ ಶ್ರೇಷ್ಠರೂ, ಉದಾರಚರಿತರೂ ಶ್ರೀ ಶಂಕರ ಭಕ್ತರೂ ಆದ ಶ್ರೀಯುತರು ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರದಲ್ಲಿ ವಿಶಾಲವಾದ ಶ್ರೀ ಶಂಕರಮಠವನ್ನು ಸ್ಥಾಪಿಸಿ ಸವೇದ ಸಂಸ್ಕೃತ ಪಾಠಶಾಲೆಯನ್ನು ನಡೆಸುತ್ತಾ ಸನಾತನ ಧರ್ಮದ ಉನ್ನತಿಗಾಗಿ, ಸ್ಥಿರತೆಗಾಗಿ ಇಳಿವಯಸ್ಸಿನಲ್ಲಿಯೂ ಶಕ್ತಿಮೀರಿ ದುಡಿಯುತ್ತಿದ್ದಾರೆ. ಅನಾರೋಗ್ಯದಿಂದ ಬಳಲುತ್ತಿದ್ದರೂ ಸತ್ಕಾರ್ಯವನ್ನು ಮಾಡಲು ಮನಸ್ಸಿನ ಆರೋಗ್ಯ ಸ್ಥಿತಿಯನ್ನು ಕಾಪಾಡಿಕೊಂಡಿದ್ದಾರೆ. 'ತಂದೆಗೆ ತಕ್ಕ ಮಗ' ಎಂಬ ನುಡಿಯಂತೆ ಈ ಮಹನೀಯರ ಪುತ್ರರಾದ ಶ್ರೀ ವಿಜಯ ಹೆಗಡೆಯವರು ತಮ್ಮ ಪೂಜ್ಯ ತಂದೆಯವರ ಪವಿತ್ರ ಕಾರ್ಯಗಳಲ್ಲಿ ಹೆಗಲು ಕೊಟ್ಟು ದುಡಿಯುತ್ತಿದ್ದಾರೆ. ಈ ಇಬ್ಬರು ಮಹನೀಯರಿಗೂ ಇವರ ಕುಟುಂಬ ವರ್ಗದವರಿಗೂ ಶ್ರೀ ಶಂಕರಭಗವತ್ಪಾದರು ಕೃಪೆಯಿಟ್ಟು ಸಕಲ ಕಲ್ಯಾಣ ಸಂಪದಗಳನ್ನು ಅನುಗ್ರಹಿಸಿ ಸದಾ ಕಾಪಾಡುತ್ತಿರಲೆಂದು ಪ್ರಾರ್ಥಿಸುತ್ತೇನೆ. ಈ ಗ್ರಂಥದ ಮುದ್ರಣ ಮುಂತಾದ ಪರಿಷ್ಕರಣಕಾರ್ಯದಲ್ಲಿ ವಿಶೇಷವಾಗಿ ಸಹಾಯ ಮಾಡಿದ ವಿದ್ವಾನ್ ಅನಂತಶರ್ಮಾ ಭುವನಗಿರಿ ಇವರ ಉಪಕಾರವನ್ನು ಸ್ಮರಿಸಿಕೊಳ್ಳುತ್ತಿದ್ದೇನೆ.

**ವಿದ್ವಾನ್ ಎನ್. ರಂಗನಾಥ ಶರ್ಮಾ**

# ಪ್ರಕಾಶಕರ ಮಾತು

ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ನಮ್ಮ ನಾಡಿನ ಸುವಿಖ್ಯಾತ ಪಂಡಿತರು. ವೇದ, ಉಪನಿಷತ್ತು, ಪುರಾಣ, ಶಾಸ್ತ್ರ, ಸಾಹಿತ್ಯಗಳನ್ನುತಲಸ್ಪರ್ಶಿಯಾಗಿ ಅಧ್ಯಯನ ಮಾಡಿ, ಬೋಧನೆ, ಬರವಣಿಗೆಗಳೆರಡರಲ್ಲಿಯೂ ಗಣನೀಯ ಹೆಸರು ಮಾಡಿದ ಈ ಹಿರಿಯ ವಿದ್ವಾಂಸರು ಪರಮ ಸಾತ್ವಿಕರೂ, ಸಜ್ಜನಿಕೆ–ವಿನಯಗಳನ್ನು ಸಾಕಾರಗೊಳಿಸಿಕೊಂಡವರೂ, ಪ್ರಚಾರ–ಪ್ರಸಿದ್ಧಿಗಳನ್ನು ಬಯಸದ ವಿರಳ ವ್ಯಕ್ತಿಗಳೂ ಆಗಿದ್ದಾರೆ. ವಿದ್ವತ್ ಲೋಕದಲ್ಲಿ ಸುಪರಿಚಿತರಾದ ಅವರು ನಮ್ಮ 'ಅನುಸಂಧಾನ' ಪತ್ರಿಕೆಗೆ ನಿರಂತರವಾಗಿ ಲೇಖನ ಬರೆದುಕೊಟ್ಟು ಪತ್ರಿಕೆಯ ಘನತೆಯನ್ನು ಹೆಚ್ಚಿಸಲು ನೆರವಾಗಿದ್ದಾರೆ. ಆ ಸಂದರ್ಭದಲ್ಲಿಯೇ ಅವರು ಅನುಸಂಧಾನದಲ್ಲಿ ದಕ್ಷಿಣಾಮೂರ್ತಿ ಸ್ತೋತ್ರವನ್ನು ಕುರಿತು ಹತ್ತು ಕಂತುಗಳಲ್ಲಿ ವ್ಯಾಖ್ಯಾನವನ್ನು ಬರೆದರು. ಪ್ರಾಜ್ಞ ಓದುಗರು ಆ ಶ್ರೇಷ್ಠ ಲೇಖನಗಳನ್ನು ಸ್ವಾಗತಿಸಿ ಓದಿ ಮೆಚ್ಚಿಕೊಂಡಿದ್ದಾರೆ. ಆಚಾರ್ಯ ಶಂಕರಭಗವತ್ಪಾದರು ಬರೆದ ಶ್ರೀ ದಕ್ಷಿಣಾಮೂರ್ತಿ ಸ್ತೋತ್ರ, ದಶಶ್ಲೋಕೀ, ಶಿವಾಪರಾಧ ಕ್ಷಮಾಪಣ ಸ್ತೋತ್ರ, ಭಜಗೋವಿದಂ ಸ್ತೋತ್ರಗಳ ವ್ಯಾಖ್ಯಾನಗಳಲ್ಲದೆ, ತಾವು ಅನುವಾದಿಸಿದ ಪ್ರಾತಃಸ್ಮರಣಂ ಹಾಗೂ ಏಕಶ್ಲೋಕಿ ಎಂಬ ಎರಡು ಸ್ತೋತ್ರಗಳನ್ನು ಒಳಗೊಂಡ ಪುಸ್ತಕವೊಂದನ್ನು ಅವರು ಸಿದ್ಧಪಡಿಸಿರುವುದನ್ನು ತಿಳಿದ ನಾವು ಅದನ್ನು ನಮ್ಮ ಶಂಕರಸೇವಾಸಮಿತಿಯಿಂದ ಪ್ರಕಟಿಸಬಯಸಿ ಅವರ ಅನುಮತಿಯನ್ನು ಕೇಳಿಕೊಂಡೆವು. ಅವರು ನಮ್ಮ ಮೇಲಿನ ವಿಶ್ವಾಸದಿಂದ ಪ್ರಕಟಿಸಲು ಒಪ್ಪಿಗೆ ಕೊಟ್ಟು ಉಪಕರಿಸಿದ್ದಾರೆ. ಅದಕ್ಕಾಗಿ ನಾವು ಕೃತಜ್ಞರು. ನಮ್ಮ ಶಂಕರಸೇವಾ ಸಮಿತಿಯು ಸಿದ್ದಾಪುರದ ಶ್ರೀ ಶೃಂಗೇರಿ ಮಠದ ಮೂಲಕ, ಆಚಾರ್ಯ ಶಂಕರರ ಸಿದ್ಧಾಂತ, ಸಂದೇಶ ಹಾಗೂ ಸಾಹಿತ್ಯವನ್ನು ಪ್ರಚಾರ ಮಾಡುವ ಕಾರ್ಯವನ್ನು ತನ್ನ ಮಿತಿಯಲ್ಲಿ ಮಾಡುತ್ತಾ ಬಂದಿದೆ. ಇದೇ ಸಮಿತಿಯಿಂದ ಈಗ ವಿದ್ವದ್ವರೇಣ್ಯರಾದ ಶ್ರೀ ರಂಗನಾಥಶರ್ಮಾರವರ ಕೃತಿಯೊಂದನ್ನು ಪ್ರಕಟಿಸುವ ಅವಕಾಶ ದೊರೆತದ್ದು ನಮ್ಮ ಭಾಗ್ಯ. ನಾಡಿನ ಆಸಕ್ತ ಸಹೃದಯ ವಾಚಕರು ಈ ಕೃತಿಯನ್ನು ಪ್ರೀತಿಯಿಂದ ಸ್ವಾಗತಿಸುವರೆಂದು ನಂಬಿದ್ದೇವೆ. ತಮ್ಮ ತೀವ್ರ ಅನಾರೋಗ್ಯದ ನಡುವೆಯೂ ಇನ್ನೂ ಬರೆಯುವ ಆಸಕ್ತಿಯನ್ನು ಉಳಿಸಿಕೊಂಡ ಕರ್ಮಯೋಗಿ ವಿದ್ವಾನ್ ರಂಗನಾಥ ಶರ್ಮಾ ಅವರ ಲೇಖನಿಯಿಂದ ಹಲವು ಉತ್ತಮ ಗ್ರಂಥಗಳು ಹೊರಬರಲಿ, ಭಗವಂತನು ಅವರಿಗೆ ಆಯುರಾರೋಗ್ಯ ಭಾಗ್ಯವನ್ನೂ ಶಕ್ತಿಯನ್ನೂ ದಯಪಾಲಿಸಲಿ ಎಂದು ಅನನ್ಯವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ. ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿ ಕೊಟ್ಟ ಸ್ಪ್ಯಾನ್‌ಪ್ರಿಂಟ್ ಮಾಲೀಕರಾದ ಶ್ರೀ ಕೆ. ನಾರಾಯಣರವರಿಗೆ ನಮ್ಮ ಕೃತಜ್ಞತೆಗಳು.

**ಗಣೇಶ ಹೆಗಡೆ ದೊಡ್ಮನೆ**
**ಅಧ್ಯಕ್ಷರು,**
**ಶ್ರೀ ಶಂಕರ ಸೇವಾ ಸಮಿತಿ ಸಿದ್ದಾಪುರ (ಉ.ಕ)**

# ಅನುಕ್ರಮಣಿಕೆ

# ೧. ದಶಶ್ಲೋಕೀ

[ಶ್ರೀಶಂಕರಭಗವತ್ಪಾದರು ವೇದಾಂತ ಪ್ರತಿಪಾದ್ಯನಾದ ಆತ್ಮನು ನಿತ್ಯಶುದ್ಧಬುದ್ಧಮುಕ್ತ ಸ್ವರೂಪನೆಂದು ಜನಸಾಮಾನ್ಯರಿಗೆ ತಿಳಿಸಿಕೊಡುವುದಕ್ಕಾಗಿ "ದಶಶ್ಲೋಕೀ" ಎಂಬ ಸ್ತೋತ್ರವನ್ನು ರಚಿಸಿದ್ದಾರೆ. ಇದಕ್ಕೆ ಶ್ರೀ ಮಧುಸೂದನ ಸರಸ್ವತೀ ಸ್ವಾಮಿಗಳು ಪ್ರೌಢವಾದ ವ್ಯಾಖ್ಯಾನವನ್ನು ಬರೆದಿದ್ದಾರೆ. ಇದರಲ್ಲಿ ವೇದಾಂತದ ಎಲ್ಲಾ ಪ್ರಮೇಯಗಳು ಬಂದು ಬಿಡುತ್ತವೆ. ಈ ವ್ಯಾಖ್ಯಾನವು ಪ್ರೌಢವಾದದ್ದೆಂದು ತಿಳಿದು ಮಹಾಮಹೋಪಾಧ್ಯಾಯರಾದ ವಾಸುದೇವಶಾಸ್ತ್ರಿ ಅಭಯಂಕರರೆಂಬ ದೊಡ್ಡ ವಿದ್ವಾಂಸರು ಸರಳ ರೀತಿಯಲ್ಲಿ ವಿಸ್ತಾರವಾದ ಟೀಕೆಯನ್ನು ಬರೆದಿದ್ದಾರೆ. ಇವೆಲ್ಲವನ್ನು ಪರಿಶೀಲಿಸಿ ವಾಚಕರಿಗೆ ಸುಲಭವಾಗಿ ಅರ್ಥವಾಗುವಂತೆ ದಶಶ್ಲೋಕಿಯ ತಾತ್ಪರ್ಯವನ್ನು ತಿಳಿಸಿ ಕೊಡಲು ಇಲ್ಲಿ ಪ್ರಯತ್ನಿಸಲಾಗಿದೆ]

**ನ ಭೂಮಿರ್ನತೋಯಂ ನ ತೇಜೋ ನ ವಾಯುಃ**
**ನ ಖಂ ನೇಂದ್ರಿಯಂ ವಾ ನ ತೇಷಾಂ ಸಮೂಹಃ ।**
**ಅನೇಕಾಂತಿಕತ್ವಾತ್ ಸುಷುಪ್ತ್ಯೇಕ ಸಿದ್ಧಃ**
**ತದೇಕೋಽ ವಶಿಷ್ಟಃ ಶಿವಃ ಕೇವಲೋಽ ಹಮ್ ॥ ೧ ॥**

**ಅಹಂ ಭೂಮಿಃ ನ, ಅಹಂ ತೋಯಂ ನ** – ಈ ಕ್ರಮದಿಂದ ಉಳಿದವನ್ನು ಅನ್ವಯಿಸಿಕೊಳ್ಳಬೇಕು. ನಾನು ಪೃಥ್ವಿಯಲ್ಲ, ನಾನು ಜಲವಲ್ಲ, ಅಗ್ನಿಯಲ್ಲ, ವಾಯುವಲ್ಲ, ಆಕಾಶವಲ್ಲ, ಇಂದ್ರಿಯವೂ ಅಲ್ಲ, ಇವೆಲ್ಲವುಗಳ ಸಮುದಾಯವಾದ ದೇಹವೂ ಅಲ್ಲ. ಏಕೆಂದರೆ **ಅನೇಕಾಂತಿಕತ್ವಾತ್** = ಹೇತುವು ವ್ಯಭಿಚರಿತವಾಗುವುದರಿಂದ, ಎಂದರೆ ಭೂಮಿ ಮೊದಲಾದುವುಗಳೆಲ್ಲವೂ ವಿನಾಶಿಗಳಾದ್ದರಿಂದ. ತತ್ = ಆದ ಕಾರಣ ಅಹಂ = ನಾನು ಸುಷುಪ್ತ್ಯೇಕ ಸಿದ್ಧಃ = ಸುಷುಪ್ತಿಗೆ ಒಬ್ಬನೇ ಸಾಕ್ಷಿಯಾಗಿ ಸಿದ್ಧನಾಗತಕ್ಕವನೂ, ಏಕಃ = ಅದ್ವಿತೀಯನೂ, ಅವಶಿಷ್ಟಃ = ಸಮಸ್ತದ್ವೈತ ವಸ್ತುಗಳು ಬಾಧಿತವಾದರೂ ಅಬಾಧಿತವಾಗಿ ಇರತಕ್ಕವನೂ, ಶಿವಃ = ಮಂಗಳ ಸ್ವರೂಪನೂ, ಕೇವಲಃ = ಸರ್ವಧರ್ಮ ರಹಿತನೂ ಆದ ಪರಮಾನಂದ ಜ್ಞಾನ ಸ್ವರೂಪನು (ಅಸ್ಮಿ) ಆಗಿದ್ದೇನೆ.

**ವಿವರಣೆ:** ನಾನು ಭೂಮಿಯಲ್ಲ, ನಾನು ಜಲವಲ್ಲ, ಈ ಪ್ರಕಾರವಾಗಿ ಅನ್ವಯ ಮಾಡಿದಾಗ ಸರ್ವತ್ರ ನಾನು ಉದ್ದೇಶ್ಯವಾಗಿದ್ದು, ಭೂಮಿ ಜಲಾದಿಗಳ

ಅಭೇದವು ನಿಷಿದ್ಧವಾಗುತ್ತದೆ. ಈ ಭೇದನಿಷೇಧವು ವಿಧೇಯರೂಪದಲ್ಲಿರುತ್ತದೆ. ಅನ್ವಯವನ್ನು ಹಿಂದೆ ಮುಂದೆ ಮಾಡಿಯೂ ಹೇಳಬಹುದು. ಹೇಗೆಂದರೆ ಭೂಮಿಯು ನಾನಲ್ಲ, ಜಲವು ನಾನಲ್ಲ ಇತ್ಯಾದಿ. ಆಗ ಭೂಮಿ, ಜಲಾದಿಗಳು ಉದ್ದೇಶ್ಯವಾಗಿದ್ದು ಅವುಗಳೊಡನೆ ನಾನು ಎಂಬುದರ ಅಭೇದವು ನಿಷಿದ್ಧವಾಗುತ್ತದೆ. ಹೀಗೆ ಎರಡು ಬಗೆಯ ಉದ್ದೇಶ್ಯ ವಿಧೇಯ ಭಾವಗಳನ್ನು ಹೇಳುವುದರಿಂದ ಉಭಯ ಪದಾರ್ಥಗಳ ಅಭೇದವು ಸರ್ವಥಾ ನಿಷಿದ್ಧವಾಗುತ್ತದೆ. ಇದರಿಂದ ಪ್ರಯೋಜನ ಉಂಟು. ಉದಾಹರಣೆ – ಚಿನ್ನವು ಉಂಗುರವಲ್ಲ ಎಂದು ಹೇಳಬಹುದು. ಚಿನ್ನದ ತುಂಡನ್ನು ಉಂಗುರದಂತೆ ಬೆರಳಿಗೆ ಹಾಕಿಕೊಳ್ಳಲು ಸಾಧ್ಯವಿಲ್ಲವಾದ್ದರಿಂದ ಈ ಹೇಳಿಕೆ ತಪ್ಪಾಗುವುದಿಲ್ಲ. ಆದರೆ ಉಂಗುರವು ಚಿನ್ನವಲ್ಲ ಎಂದು ಮಾತ್ರ ಹೇಳಲಾಗುವುದಿಲ್ಲ. ಉಂಗುರವು ಎಲ್ಲ ವಿಧದಲ್ಲೂ ಚಿನ್ನವೇ ಆಗಿರುತ್ತದೆ. ಹೀಗೆ ಸೂಕ್ಷ್ಮವಾದ ದೃಷ್ಟಿಭೇದವಿರುತ್ತದೆ.

ಚಾರ್ವಾಕರು ದೇಹವೇ ಆತ್ಮ ಎನ್ನುತ್ತಾರೆ. ಅವರು ಆಕಾಶವನ್ನು ಒಂದು ಪದಾರ್ಥವೆಂದು ಅಂಗೀಕರಿಸುವುದಿಲ್ಲ. ಅವರ ಮತದಂತೆ ಭೂಮಿ ಮೊದಲಾದ ನಾಲ್ಕು ಮಹಾಭೂತಗಳೂ ಸೇರಿ ದೇಹವಾಗಿದೆ. ಆದ್ದರಿಂದ 'ದೇಹವು ನಾನಲ್ಲ' ಎಂದು ಹೇಳುವುದನ್ನು ಬಿಟ್ಟು ಭೂಮಿ ನಾನಲ್ಲ, ಜಲವು ನಾನಲ್ಲ ಎಂಬುದಾಗಿ ಒಂದೊಂದನ್ನೇ ನಿಷೇಧಿಸುವುದೇಕೆ? ಅವರು ಸಂಘಾತವನ್ನು ಒಪ್ಪುವುದಿಲ್ಲ. ಸಂಘಾತವು ಒಂದು ಪ್ರತ್ಯೇಕವಾದ ವಸ್ತುವಲ್ಲ ಎನ್ನುತ್ತಾರೆ. ಅವರ ಮತದಂತೆ ಇಲ್ಲಿ ಬೇರೆ ಬೇರೆಯಾಗಿ ನಿಷೇಧವನ್ನು ಮಾಡಿದ್ದಾರೆ.

ಚಾರ್ವಾಕಮತದಲ್ಲಿ ಆಕಾಶವು ಮಹಾಭೂತಗಳಲ್ಲಿ ಸೇರುವುದಿಲ್ಲವಾದ್ದರಿಂದ ಶ್ಲೋಕದಲ್ಲಿರುವ 'ಖ' ಶಬ್ದಕ್ಕೆ ಶೂನ್ಯ ಎಂದರ್ಥ. ಶೂನ್ಯ ಎಂಬುದನ್ನು ಬೌದ್ಧರು ಅಂಗೀಕರಿಸಿದ್ದಾರೆ. ಆಗ ಶೂನ್ಯವೂ ನಾನಲ್ಲ ಎಂದು ಅರ್ಥವನ್ನು ಹೇಳಬೇಕು. ದೇಹವು ಪಂಚಭೂತಗಳ ಸಮುದಾಯವೆಂಬ ಇನ್ನೊಂದು ಪಕ್ಷದಲ್ಲಿ 'ಖ' ಶಬ್ದಕ್ಕೆ ಆಕಾಶವೆಂದು ಅರ್ಥ.

ನಾನು ಇಂದ್ರಿಯವಲ್ಲ ಎಂಬಲ್ಲಿ ಇಂದ್ರಿಯ ಶಬ್ದದಿಂದ ನೇತ್ರವೇ ಮೊದಲಾದ ಸರ್ವೇಂದ್ರಿಯಗಳನ್ನು ತೆಗೆದುಕೊಳ್ಳಬೇಕು. ಅವುಗಳ ಸಮುದಾಯವು ನಾನಲ್ಲ ಎಂಬಲ್ಲಿ ಪಂಚಭೂತಗಳ ಮತ್ತು ಇಂದ್ರಿಯಗಳ

ಸಮುದಾಯವಿರುವ ದೇಹವೂ ನಾನಲ್ಲ ಎಂದರ್ಥ. ಮಹಾಭೂತಗಳನ್ನು ನಿಷೇಧಿಸಿದ್ದರಿಂದ ಭೌತಿಕಗಳಾದ ಪಂಚಪ್ರಾಣಗಳಿಗೂ ಮನಸ್ಸಿಗೂ ನಿಷೇಧವಾಯಿತೆಂದು ತಿಳಿಯಬೇಕು. ಮನಸ್ಸಿನ ನಿರಾಕರಣೆಯಿಂದ ಮನೋವೃತ್ತಿಯಾದ ಕ್ಷಣಿಕ ವಿಜ್ಞಾನಕ್ಕೂ ನಿರಾಸವಾಯಿತೆಂದು ತಿಳಿಯಬೇಕು. ವಿಜ್ಞಾನವಾದಿಗಳಾದ ಬೌದ್ಧರ ಇನ್ನೊಂದು ಮತದಂತೆ ಕ್ಷಣಿಕ ವಿಜ್ಞಾನವೂ ಆತ್ಮವಾಗುತ್ತದೆ. ಅದೂ ಇಲ್ಲಿ ನಿರಸ್ತವಾಯಿತು. ಜ್ಞಾನ, ಇಚ್ಛೆ, ಸುಖ, ದುಃಖಾದಿಗಳು ವೇದಾಂತಶಾಸ್ತ್ರದ ಸಿದ್ಧಾಂತದಂತೆ ಮನೋವೃತ್ತಿಗಳು, ನೈಯಾಯಿಕರು ಹೇಳುವಂತೆ ಅವು ಆತ್ಮಧರ್ಮಗಳಲ್ಲ. ಕರ್ತೃತ್ವ ಭೋಕ್ತೃತ್ವಗಳೂ ಸಹ ಮನಸ್ಸಿಗೆ, ಚಿತ್ತಕ್ಕೆ ಅಂತಃಕರಣಕ್ಕೆ ಸೇರಿದವು; ಆತ್ಮನಿಗಲ್ಲ. ಆತ್ಮನು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ. ಆತ್ಮನು ಒಬ್ಬನೇ ಆದರೂ ಅಂತಃಕರಣಗಳು ಅನಂತವಾಗಿರುವುದರಿಂದ ಚೈತ್ರನಿಗಾಗುವ ಸುಖವು ಮೈತ್ರನಿಗಾಗುವುದಿಲ್ಲ. ಮೈತ್ರನಿಗಾಗುವ ದುಃಖವು ಚೈತ್ರನಿಗಾಗುವುದಿಲ್ಲ. ಅಂತಃಕರಣಗಳ ಭೇದದಿಂದ ಜೀವಭೇದಗಳಾಗುತ್ತವೆ.

ಭೂಮಿ ಮುಂತಾದ ಬಾಹ್ಯ ಪದಾರ್ಥಗಳೆಲ್ಲವೂ ಅನಿತ್ಯವಾದವುಗಳು. ಅವುಗಳ ಹುಟ್ಟು ಸಾವುಗಳಿಗೆ ಆತ್ಮನು ಸಾಕ್ಷಿಯಾಗಿದ್ದಾನೆ. ಆತ್ಮನಿಗೆ ಹುಟ್ಟು, ಸಾವುಗಳಿಲ್ಲವಾದ್ದರಿಂದ ಅವನು ನಿತ್ಯನಾದವನು. ಆತ್ಮನಿಗೆ ಹುಟ್ಟು, ಸಾವುಗಳಿದ್ದರೆ ಅದಕ್ಕೆ ಸಾಕ್ಷಿ ಯಾರು? ಆತ್ಮನು ಒಬ್ಬನೇ ಆದ್ದರಿಂದ ಸಾಕ್ಷಿಯಾದ ಇನ್ನೊಬ್ಬನಿಲ್ಲ. ಶ್ರುತಿಗಳು ಆತ್ಮನು ಒಬ್ಬನೇ ಆದ್ದರಿಂದ ಶಾಶ್ವತನೆಂದೂ ಘೋಷಿಸುತ್ತವೆ. ಆದ್ದರಿಂದ ಅನಿತ್ಯಗಳಾದ ಭೂಮ್ಯಾದಿಗಳು ಆತ್ಮನಲ್ಲವೆಂದು ಸಿದ್ಧವಾಗುತ್ತದೆ. ಈ ಅಭಿಪ್ರಾಯದಿಂದಲೇ ಶ್ಲೋಕದಲ್ಲಿ **ಅನೈಕಾಂತಿಕತ್ವಾತ್** ಎಂದು ಹೇಳಿದ್ದಾರೆ. ನಿತ್ಯವಾದದ್ದು ಆತ್ಮ. ನಿತ್ಯತ್ವವೆಂಬ ಹೇತು ಭೂಮ್ಯಾದಿಗಳಲ್ಲಿಲ್ಲವಾದ್ದರಿಂದ ಅದು ವ್ಯಭಿಚರಿತವಾದದ್ದು. ಸ್ವಯಂಪ್ರಕಾಶನೂ, ಜ್ಞಾನಸ್ವರೂಪನೂ ಅದ್ವಿತೀಯನೂ ಆದ ಆತ್ಮನಲ್ಲಿ ಭೂಮಿ ಜಲಾದಿಗಳೆಲ್ಲವೂ ಅವಿದ್ಯಾಕಲ್ಪಿತಗಳೆಂದೂ ತೋರುತ್ತಾ ಅಡಗುತ್ತಾ ಇರುವ ಇವೆಲ್ಲವೂ ಅನಿರ್ವಚನೀಯಗಳೆಂದೂ ತಿಳಿಯಬೇಕು.

'ಸುಷುಪ್ತ್ಯೇಕಸಿದ್ಧಃ' ಎಂಬಲ್ಲಿ ಒಂದು ಶಂಕೆ ಹುಟ್ಟುತ್ತದೆ. ಆತ್ಮನು ಸುಷುಪ್ತಿಗೆ ಸಾಕ್ಷಿಯಾದವನೆಂದೂ ಜ್ಞಾನಸ್ವರೂಪನೆಂದೂ ಹೇಳುತ್ತೀರಿ. ಇದು ಅನುಭವಕ್ಕೆ ವಿರುದ್ಧವಾಗಿದೆ. ಗಾಢನಿದ್ರೆಯಲ್ಲಿ ಏನೂ ಗೊತ್ತಾಗುವುದಿಲ್ಲ. ಆಗ

ನಮಗೆ ಯಾವ ಜ್ಞಾನವೂ ಇರುವುದಿಲ್ಲ. ಜ್ಞಾನವೇ ಇಲ್ಲದಾಗ ಆತ್ಮನು ಸಾಕ್ಷಿಯಾಗಿ ಜ್ಞಾನಸ್ವರೂಪವಾಗಿರುವುದು ಹೇಗೆ? ಇದಕ್ಕೆ ಸಮಾಧಾನವೆಂದರೆ "ಗಾಢನಿದ್ರೆಯಲ್ಲಿ ನನಗೇನೂ ಗೊತ್ತಾಗಲಿಲ್ಲ. ನಾನು ಯಾವುದನ್ನೂ ತಿಳಿಯದ ಮೂಢನಾಗಿದ್ದೆ" ಎಂದು ಎಚ್ಚರವಾದವನು ಹೇಳುತ್ತಾನಷ್ಟೆ. ಈ ಮೌಢ್ಯವು ಸರ್ವಸಂಮತವಾದದ್ದು. ಇದು ಸಷುಪ್ತಿ ಕಾಲದಲ್ಲಿದ್ದ ಸ್ಥಿತಿಯ ಸ್ಮರಣೆ. ಅನುಭವಿಸಿದ್ದು ಮಾತ್ರ ಸ್ಮರಣೆಗೆ ಬರುತ್ತದೆ. ಈ ಮೌಢ್ಯವು ಅಂತಃಕರಣನಿಷ್ಠವಾದದ್ದು. ನಿದ್ರೆಯಲ್ಲಿ ಏನನ್ನೂ ಅನುಭವಿಸದ ಅಂತಃಕರಣಕ್ಕೆ ಸಾಕ್ಷಿಯಾದ – ಆತ್ಮಚೈತನ್ಯವಿದ್ದುದರಿಂದಲೇ ಎಚ್ಚರವಾದಾಗ 'ಏನೂ ಗೊತ್ತಾಗಲಿಲ್ಲ' ಎಂಬುದು ಸ್ಮರಣೆಗೆ ಬರುತ್ತದೆ. ಸಾಕ್ಷಿ ಇಲ್ಲದಿದ್ದರೆ ಈ ಸ್ಮರಣೆ ಬರುತ್ತಿರಲಿಲ್ಲ. ಆದ್ದರಿಂದ ಜ್ಞಾನಸ್ವರೂಪನಾದ ಆತ್ಮನು ಸುಷುಪ್ತಿಯಲ್ಲಿಯೂ ಇರುತ್ತಾನೆ ಎಂದು ಸಿದ್ಧವಾಗುತ್ತಿದೆ.

ಇಲ್ಲೊಂದು ಶಂಕೆ ಹುಟ್ಟುತ್ತದೆ. ಅಂತಃಕರಣಾದಿಗಳನ್ನು ನೋಡತಕ್ಕ ಆತ್ಮನು ಸಾಕ್ಷಿಯೆಂದಾದರೆ ಈ ಪ್ರತ್ಯಗಾತ್ಮನು ದ್ರಷ್ಟೃ ಎಂದಾಯಿತು. ಅವನಲ್ಲಿ ದ್ರಷ್ಟೃತ್ವ ಇದೆಯೆಂದು ಹೇಳಬೇಕಾಗುತ್ತದೆ. ಆತ್ಮನು ನಿರ್ಧರ್ಮಕನೆಂದೂ ಹೇಳುತ್ತೀರಿ. ಇದು ವಿರುದ್ಧವಾಗುವುದಿಲ್ಲವೇ? ಹಾಗಲ್ಲ. ಪರಮಾತ್ಮನು ಸರ್ವಸಾಕ್ಷಿಯಾಗಿದ್ದಾನೆಂದು ಉಪನಿಷತ್ತುಗಳು ಸಾರುತ್ತವೆ.

**೧. ನ ದೃಷ್ಟೇರ್ದ್ರಷ್ಟಾರಂ ಪಶ್ಯೇಃ।** (ಬೃಹಃ–೩–೪–೨)
ಲೌಕಿಕವಾದ ದರ್ಶನ ಶಕ್ತಿಯನ್ನೇ ಸಾಕ್ಷಿಯಾಗಿ ನೋಡುತ್ತಿರುವ ಆತ್ಮನನ್ನು ನೀನು ನೋಡಲಾರೆ.

**೨. ಅದೃಷ್ಟೋ ದ್ರಷ್ಟಾ।** (ಬೃಹಃ ೩–೭–೨೩)
ಜನರ ದರ್ಶನಕ್ಕೆ ಅಗೋಚರವಾದ ಪರಮಾತ್ಮನು ಸರ್ವಸಾಕ್ಷಿಯಾಗಿ ಸರ್ವದ್ರಷ್ಟಾರನಾಗಿದ್ದಾನೆ.

**೩. ನಾನ್ಯೋಽತೋಽಸ್ತಿ ದ್ರಷ್ಟಾ।** (ಬೃಹಃ ೩–೭–೨೩)
ಆ ಪರಮಾತ್ಮನಿಗಿಂತ ಅನ್ಯವಾದ ಯಾವ ದ್ರಷ್ಟಾರನೂ ಇಲ್ಲ. (ಅವನೊಬ್ಬನೇ ಸರ್ವಸಾಕ್ಷಿಯಾದ ದ್ರಷ್ಟಾರ)

**ತಸ್ಯ ಭಾಸಾ ಸರ್ವಮಿದಂ ವಿಭಾತಿ** (ಶ್ವೇತಾ) ಇತ್ಯಾದಿ ಶ್ರುತಿ ವಾಕ್ಯಗಳನ್ನು

ಇಲ್ಲಿ ಉದಾಹರಿಸಬಹುದು. ಪರಮಾತ್ಮನು ಜ್ಞಾನಸ್ವರೂಪನೇ ಆದ್ದರಿಂದ ಅವನಲ್ಲಿ ಇನ್ನೊಂದು ದ್ರಷ್ಟೃತ್ವವೆಂಬ ಧರ್ಮವು ಇರಬೇಕಾದ್ದಿಲ್ಲ. ಲೋಕವ್ಯವಹಾರವನ್ನನುಸರಿಸಿ ದ್ರಷ್ಟೃ ಎಂದು ಹೇಳಿದೆ.

**ನ ವರ್ಣಾ ನ ವರ್ಣಾಶ್ರಮಾಚಾರಧರ್ಮಾಃ**
**ನ ಮೇ ಧಾರಣಾಧ್ಯಾನಯೋಗಾದಯೋಽಪಿ ।**
**ಅನಾತ್ಮಾಶ್ರಯಾಹಂ ಮಮಾಧ್ಯಾಸಹಾನಾತ್**
**ತದೇಕೋಽವಶಿಷ್ಟಃ ಶಿವಃ ಕೇವಲೋಽ ಹಮ್ ॥ ೨ ॥**

ನನಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇತ್ಯಾದಿಯಾಗಿ ಯಾವ ವರ್ಣಭೇದಗಳೂ ಇಲ್ಲ. ವರ್ಣಗಳು ಮಾತ್ರವಲ್ಲ, ಬ್ರಹ್ಮಚಾರಿ ಗೃಹಸ್ಥ ಮುಂತಾದ ಯಾವ ಆಶ್ರಮಗಳೂ ಇಲ್ಲ. ಹಾಗೆಯೇ ವರ್ಣಾಶ್ರಮಗಳಿಗೆ ಸಂಬಂಧಿಸಿದ ಯಾವ ಆಚರಣೆಗಳು, ಧರ್ಮಗಳೂ ಇಲ್ಲ. ಮನಸ್ಸನ್ನು ಪರಮಾತ್ಮನಲ್ಲಿ ಸ್ಥಿರವಾಗಿ ನಿಲ್ಲಿಸಬೇಕೆಂಬ ಧಾರಣೆಯಾಗಲಿ, ಧ್ಯಾನವಾಗಲಿ, ಯೋಗಾಭ್ಯಾಸವಾಗಲಿ ಅಥವಾ ಶ್ರವಣ, ಮನನಗಳಾಗಲಿ ಇಲ್ಲ. ಏಕೆಂದರೆ ಅವಿದ್ಯಾಜನ್ಯವಾದ 'ನಾನು ನನ್ನದು' ಎಂಬ ಭ್ರಾಂತಿಯು ನನಗೆ ಹೋಗಿಬಿಟ್ಟಿದೆ. **ಆದ್ದರಿಂದ ನಾನು ಸಮಸ್ತ ನಿಷೇಧಗಳಿಗೂ ಒಳಗಾಗದವನೂ ಸರ್ವಧರ್ಮರಹಿತನೂ ಪರಮಾನಂದ ಜ್ಞಾನಸ್ವರೂಪನೂ ಆದ ಅದ್ವಯನಾಗಿದ್ದೇನೆ.**

**ಟಿಪ್ಪಣಿ :** ಅನಾತ್ಮಾ = ಆತ್ಮವಿರೋಧಿನೀ ಅವಿದ್ಯಾ, ಅದನ್ನು ಆಶ್ರಯಿಸಿಕೊಂಡು ಬಂದ ಅಧ್ಯಾಸ = ಭ್ರಾಂತಿ, ಮಿಥ್ಯಾಜ್ಞಾನ.

ಆತ್ಮನು ಜ್ಞಾನಸ್ವರೂಪನೆಂದೂ ಅವನಲ್ಲಿ ಕರ್ತೃತ್ವಾದಿ ಧರ್ಮವಾವುದೂ ಇಲ್ಲವೆಂದೂ ಹೇಳಿದರೆ **ಬ್ರಾಹ್ಮಣೋ ಯಜೇತ, ಅಹರಹಃ ಸಂಧ್ಯಾಮುಪಾಸೀತ** ಇತ್ಯಾದಿ ವಿಧಿಗಳು ಯಾರಿಗಾಗಿ? ವೇದೋಕ್ತ ಕರ್ಮಕಾಂಡವನ್ನು ನಡೆಸತಕ್ಕವನೇ ಇಲ್ಲದಾಗ ವೇದದ ಪ್ರಾಮಾಣ್ಯವೇ ಕುಸಿದು ಹೋಗುತ್ತದೆ. ವೇದದ ಪ್ರಾಮಾಣ್ಯವನ್ನೇ ಒಪ್ಪದೇ ಹೋದರೆ ಬ್ರಹ್ಮವೆಂಬುದೇ ಇಲ್ಲವೆಂದಾದೀತು. ಆದ್ದರಿಂದ ಕರ್ತೃತ್ವ, ಭೋಕ್ತೃತ್ವ ಮುಂತಾದವು ಆತ್ಮನಲ್ಲಿವೆಯೆಂದು ಅವಶ್ಯವಾಗಿ ಒಪ್ಪಲೇಬೇಕಾಗುತ್ತದೆಯಲ್ಲವೇ? ಹಾಗಲ್ಲ. ತತ್ತ್ವಜ್ಞಾನ ಉಂಟಾಗುವುದಕ್ಕೆ ಮೊದಲು ಜನರು ಅವಿದ್ಯೆಗೆ ಒಳಗಾಗಿ ವ್ಯವಹಾರ ಮಾರ್ಗದಲ್ಲಿರುತ್ತಾರೆ. ನಾನು ಕರ್ತೃ, ನಾನು ಭೋಕ್ತೃ ಎಂಬ ಭಾವನೆಯಿಂದಲೇ ಲೋಕ ವ್ಯವಹಾರವು

ನಡೆಯುತ್ತದೆ. ಈ ವ್ಯವಹಾರ ಮಾರ್ಗದಲ್ಲಿರುವಾಗ ವೇದೋಕ್ತವಿಧಿಗಳೆಲ್ಲವೂ ಸಾರ್ಥಕಗಳು. ಆಗ ವೇದಗಳ ಪ್ರಾಮಾಣ್ಯವು ನಿರ್ಬಾಧವಾದದ್ದು. ಆದ್ದರಿಂದ ಯಾವ ಶಂಕೆಗೂ ಅವಕಾಶವಿಲ್ಲ. ಇನ್ನು ತತ್ತ್ವಜ್ಞಾನಿಗಾದರೋ ಕರ್ತೃತ್ವ ಭೋಕ್ತೃತ್ವಗಳೇನೂ ಇಲ್ಲವಾದ್ದರಿಂದ ಜ್ಞಾತೃಜ್ಞೇಯ ಭಾವವೂ ಲುಪ್ತವಾಗಿರುತ್ತದೆ. ಆತನಿಗೆ ವರ್ಣ, ಆಶ್ರಮ ಸ್ಥಿತಿಯಲ್ಲಿ ಮಾತ್ರ ವಿಧಿ ನಿಷೇಧಗಳು ಅರ್ಥವತ್ತಾದವೆಂದೂ ತಾತ್ಪರ್ಯ. ವರ್ಣಾಶ್ರಮಾದಿ ವ್ಯವಹಾರವು ಅವಿದ್ಯಾ ಮೂಲಕವಾದದ್ದೆಂಬುದನ್ನು ದೃಢಪಡಿಸುವುದಕ್ಕಾಗಿ ಮುಂದಿನ ಶ್ಲೋಕವು ಹೊರಟಿದೆ.

**ನ ಮಾತಾ ಪಿತಾ ವಾ ನ ದೇವಾ ನ ಲೋಕಾಃ**
**ನ ವೇದಾ ನ ಯಜ್ಞಾ ನ ತೀರ್ಥಂ ಬ್ರುವಂತಿ ।**
**ಸುಷುಪ್ತೌ ನಿರಸ್ತಾತಿಶೂನ್ಯಾತ್ಮಕತ್ವಾತ್**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೩ ॥**

ಸುಷುಪ್ತಿ (ಗಾಢನಿದ್ರೆ)ಯಲ್ಲಿದ್ದಾಗ ಇವಳು ನನ್ನ ತಾಯಿ, ಇವನು ನನ್ನ ತಂದೆ ಎಂದು ಹೇಳುವುದಿಲ್ಲ. ಆಗ ಇಂದ್ರಾದಿ ದೇವತೆಗಳ ವಿಚಾರವನ್ನೂ, ಸ್ವರ್ಗಲೋಕ, ನರಕ ಮುಂತಾದ ವಿಷಯಗಳನ್ನೂ ನುಡಿಯುವುದಿಲ್ಲ. ಗಾಢನಿದ್ರೆಯ ಸಮಯದಲ್ಲಿ ವೇದಗಳ ವಿಷಯವೂ ಇರುವುದಿಲ್ಲ. ಯಜ್ಞಗಳ ವಿಷಯವೂ ಇರುವುದಿಲ್ಲ. ತೀರ್ಥಕ್ಷೇತ್ರಗಳ ವಿಚಾರವಾಗಿಯೂ ಮಾತಾಡುವುದಿಲ್ಲ. ಹೀಗೆ ಸರ್ವ ವ್ಯವಹಾರವೂ ಸುಷುಪ್ತಿ ಕಾಲದಲ್ಲಿ ಲುಪ್ತವಾಗಿಬಿಡುತ್ತದೆ. ಏಕೆಂದರೆ **ನಿರಸ್ತಾಽತಿಶೂನ್ಯಾತ್ಮಕತ್ವಾತ್** ಅತ್ಯಂತ ಶೂನ್ಯವಾಗದೆ ಕೇವಲ ಚೈತನ್ಯಸ್ವರೂಪನಾದ್ದರಿಂದ ಯಾವ ಲೋಕ ವ್ಯವಹಾರವೂ ಇರುವುದಿಲ್ಲ. ಆದ್ದರಿಂದ ಅಬಾಧಿತನಾಗಿ ಉಳಿದಿರುವ ಅದ್ವಿತೀಯನೂ ಮಂಗಳ ಸ್ವರೂಪನೂ ಆದ ಬ್ರಹ್ಮನೇ ನಾನಾಗಿದ್ದೇನೆ.

ಸುಷುಪ್ತಿಯಲ್ಲಿ ಸರ್ವ ವ್ಯವಹಾರಗಳು ಇಲ್ಲದಿದ್ದರೂ ಆತ್ಮನು ಇದ್ದೇ ಇರುತ್ತಾನೆ. ಆದ್ದರಿಂದ ಸುಷುಪ್ತಿಯು ಮೂರು ಅವಸ್ಥೆಗಳಲ್ಲೊಂದಾಗಿದೆ. ಆತ್ಮನಿಲ್ಲದೆ ಅದು ಅವಸ್ಥೆ ಹೇಗಾದೀತು. ಆತ್ಮನಿರುವುದರಿಂದಲೇ ಮತ್ತೆ ಎಚ್ಚರವಾಗುತ್ತದೆ. ಆದ್ದರಿಂದ ಅತ್ಯಂತ ಶೂನ್ಯನಾಗುವುದಿಲ್ಲವೆಂದೂ ಶ್ಲೋಕದಲ್ಲಿ ಹೇಳಿದೆ.

**ನಿರಸ್ತಾತಿಶೂನ್ಯಾತ್ಮಕತ್ವಾತ್** ಎಂಬ ಮಾತಿಗೆ ಇನ್ನೊಂದು ಬಗೆಯಲ್ಲಿಯೂ ಅರ್ಥವನ್ನು ಹೇಳಬಹುದು. ನಿರಸ್ತ=ಷಡೂರ್ಮಿಗಳಿಂದ ರಹಿತನಾದವನು

ಮತ್ತು ಅತಿ ಶೂನ್ಯವಾದ ಎಂದರೆ ಸರ್ವದ್ವೈತ ಶೂನ್ಯವಾಗಿ ಅದ್ವೈತವಾದ ಬ್ರಹ್ಮಸ್ವರೂಪನಾದ್ದರಿಂದ ಎಂದರ್ಥ.

**ವಿವರಣೆ:** ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಸಾವು ಇವು ಆರು ಊರ್ಮಿಗಳು. ಊರ್ಮಿ ಎಂದರೆ ಅಲೆ. ಈ ಆರು ಅಲೆಗಳಂತೆ ಜೀವಾತ್ಮನನ್ನು ಅಪ್ಪಳಿಸುತ್ತಲೇ ಇರುತ್ತವೆ. ಸುಷುಪ್ತಿಯಲ್ಲಿ ಈ ಷಡೂರ್ಮಿಗಳ ಬಾಧೆ ಇಲ್ಲ. **ಸತಾ ಸೋಮ್ಯ ತದಾ ಸಂಪನ್ನೋ ಭವತಿ** (ಛಾಂ ೬-೮-೧) ಇತ್ಯಾದಿ ಶ್ರುತಿವಚನಗಳು ಗಾಢನಿದ್ರೆಯಲ್ಲಿ ಜೀವಾತ್ಮನು ಪರಮಾತ್ಮನೊಡನೆ ಸೇರಿಹೋಗುತ್ತಾನೆ ಎಂದು ಹೇಳುತ್ತವೆ. ಪರಬ್ರಹ್ಮವಾದರೋ ಸಮಸ್ತದ್ವೈತಗಳಿಂದ ಶೂನ್ಯವಾದದ್ದು. ಹೀಗೆ ಅದ್ವೈತವಾದ **ಕ**-ಬ್ರಹ್ಮ ಎಂದರ್ಥ. ಛಾಂದೋಗ್ಯದಲ್ಲಿ **"ಕಂ ಬ್ರಹ್ಮ ಖಂ ಬ್ರಹ್ಮ"** (ಛಾಂ. ೪-೧೦-೫) ಎಂದು **'ಕ'** ಶಬ್ದಕ್ಕೆ ಬ್ರಹ್ಮ ಎಂದರ್ಥವು ಉಕ್ತವಾಗಿದೆ. 'ಅತಿಶೂನ್ಯಾತ್ಮಕತ್ವಾತ್' ಎಂಬುದಕ್ಕೆ ಹೇಳಿದ ಮೊದಲನೆಯ ಅರ್ಥದಲ್ಲಿ ಅದು ಬಹುವ್ರೀಹಿ ಸಮಾಸವಾದ್ದರಿಂದ **'ಕ'** ಎಂಬುದು ಪ್ರತ್ಯಯವೆಂದು ತಿಳಿಯಬೇಕು. ಎರಡನೆಯ ಅರ್ಥದಲ್ಲಿ ಅದು ಪ್ರತ್ಯಯವಲ್ಲ ಕ ಎಂದರೆ ಬ್ರಹ್ಮವಾಚಕ ಶಬ್ದ ಎಂದು ತಿಳಿಯಬೇಕು.

ಈ ದಶಶ್ಲೋಕಿಯಲ್ಲಿ 'ತತ್ತ್ವಮಸಿ' ಎಂಬ ಮಹಾವಾಕ್ಯದ ಅರ್ಥವನ್ನು ಪ್ರತಿಪಾದಿಸಿ ಜೀವಬ್ರಹ್ಮರ ಐಕ್ಯವನ್ನು ತಿಳಿಸಬೇಕೆಂದು ಶ್ರೀಶಂಕರಭಗವತ್ಪಾದರ ಉದ್ದೇಶವಾಗಿರುತ್ತದೆ. ಲೋಕದಲ್ಲಿ ಜೀವಾತ್ಮನು ಸುಖದುಃಖ, ರಾಗದ್ವೇಷಾದಿ ನಾನಾ ಗುಣಗಳಿಂದ ಕೂಡಿದವನೆಂದೂ ಪರಮಾತ್ಮನು ದಯೆ, ವಾತ್ಸಲ್ಯ, ಅಸಾಧಾರಣವಾದ ಶಕ್ತಿ ಮುಂತಾದ ವಿಶಿಷ್ಟ ಗುಣಗಳಿಂದ ಕೂಡಿದವನೆಂದೂ ಪ್ರಸಿದ್ಧಿ ಇದೆ. ಹೀಗಿರುವಾಗ ಜೀವಾತ್ಮ ಪರಮಾತ್ಮರ ಅಭೇದವನ್ನು ಸಾಧಿಸುವುದು ಅಶಕ್ಯವಾಗುತ್ತದೆ. ಉಭಯರಲ್ಲಿ ತೋರುವ ಗುಣಗಳು ಆರೋಪಿತವಾದವುಗಳೆಂದೂ ವಸ್ತುತಃ ಉಭಯರೂ ನಿರ್ಧರ್ಮಕರೆಂದೂ ಹೇಳಿದಾಗ ಮಾತ್ರ ಅಭೇದವನ್ನು ಶ್ರುತಿ ಪ್ರಾಮಾಣ್ಯದಿಂದ ಹೇಳುವುದು ಸುಲಭ.

ಇದುವರೆಗೆ ಹೇಳಿದ ಮೂರು ಶ್ಲೋಕಗಳಲ್ಲಿಯೂ **ಶಿವಃ ಕೇವಲೋಽಹಂ** ಎಂಬ ವಚನದಿಂದ **ನಾನು ನಿರ್ಧರ್ಮಕ** ಎಂದು ಹೇಳಿದ್ದಾಗಿದೆ. ಈಗ ಪರಮಾತ್ಮನು (ಪರಬ್ರಹ್ಮವೂ) ನಿರ್ಧರ್ಮಕನೆಂದು ಸಾಧಿಸುವುದಕ್ಕಾಗಿ ಮುಂದಿನ ಶ್ಲೋಕವು ಪ್ರವೃತ್ತವಾಗಿದೆ.

**ಸದೇವ ಸೋಮ್ಯೇದಮಗ್ರ ಆಸೀತ್** (ಛಾಂ. ೬-೨-೧) ಎಂದು ಛಾಂದೋಗ್ಯೋಪನಿಷತ್ತಿನಲ್ಲಿದೆ. ಶ್ವೇತಕೇತುವಿಗೆ ಅವನ ತಂದೆಯಾದ ಆರುಣಿಯು ಹೇಳಿದ ನುಡಿ ಇದು. **ಹೇ ಸೋಮ್ಯ-ಶ್ವೇತಕೇತು! ಇದಂ**=ಈ ಜಗತ್ತು, **ಅಗ್ರೇ**- ಸೃಷ್ಟಿಗೆ ಪೂರ್ವದಲ್ಲಿ, **ಸದೇವ,** ಕೇವಲ 'ಸತ್' ಮಾತ್ರವೇ. **ಆಸೀತ್** ಆಗಿತ್ತು ಎಂದರ್ಥ. ಸತ್ ಎಂದರೆ ಬ್ರಹ್ಮ. ಬ್ರಹ್ಮ ಒಂದೇ ಮೊದಲು ಇತ್ತು ಎಂದರೆ ಆ ಬಹ್ಮವೇ ಜಗತ್ತಿಗೆ ಕಾರಣವೆಂದೂ ಸಿದ್ಧವಾಗುತ್ತದೆ. ಈ ಗಡಿಗೆ ಬೆಳಿಗ್ಗೆ ಬರಿಯ ಮಣ್ಣಿನ ಮುದ್ದೆಯಾಗಿತ್ತು ಎಂದರೆ ಮಣ್ಣಿನ ಮುದ್ದೆಯೇ ಗಡಿಗೆಗೆ ಕಾರಣವೆಂದೂ ಸಿದ್ಧವಾಗುತ್ತದೆ. ಹಾಗೆಯೇ ಸತ್ ಎಂಬ ಬ್ರಹ್ಮವೇ ಜಗತ್ತಿಗೆ ಕಾರಣ ಎಂಬುದು ವೇದಾಂತದ ಸಿದ್ಧಾಂತವಾಗಿದೆ.

ಇದರ ಮೇಲೆ ವಾದಿಗಳ ವಿಪ್ರತಿಪತ್ತಿಗಳು ಹಲವಾರು ಇವೆ. **ಸಾಂಖ್ಯರು** ಸತ್ ಎಂದರೆ ಅಚೇತನವೂ ತ್ರಿಗುಣಾತ್ಮಕವೂ ಆದ ಪ್ರಧಾನವೆಂದೂ ಅದೇ ಜಗತ್ತಿಗೆ ಕಾರಣವೆಂದೂ ಹೇಳುತ್ತಾರೆ. ಬ್ರಹ್ಮ ಎಂಬ ಈಶ್ವರನು ಇಲ್ಲವೇ ಇಲ್ಲವೆಂದೂ ಹೇಳುತ್ತಾರೆ. ಆದರೆ ಅನಂತ ಸಂಖ್ಯೆಯಲ್ಲಿ ಜೀವರಿದ್ದಾರೆಂದೂ ಹೇಳುತ್ತಾರೆ. ಜೀವರನ್ನು 'ಪುರುಷ' ಎಂಬ ಶಬ್ದದಿಂದ ಅವರು ವ್ಯವಹರಿಸುತ್ತಾರೆ. ಬ್ರಹ್ಮವೇ ಇಲ್ಲದಾಗ ಜೀವ ಬ್ರಹ್ಮರ ಏಕತೆಯ ಪ್ರಶ್ನೆಯೇ ಅವರಲ್ಲಿ ಉದ್ಭವಿಸುವುದಿಲ್ಲ.

ಇನ್ನು **ಪಾಶುಪತರು** "ಬ್ರಹ್ಮವೆಂದರೆ ಪಶುಪತಿ ಶಿವ, ಜೀವಾತ್ಮರು ಪಶುಪತಿಯನ್ನು ಉಪಾಸನೆ ಮಾಡಬೇಕು. ಜೀವಾತ್ಮರು ಸಂಸಾರದಲ್ಲಿದ್ದಾಗ ಪಶುಪತಿಗಿಂತ ಸಂಪೂರ್ಣವಾಗಿ ಭಿನ್ನರು. ಪಶುಪತಿಯೇ ಸೃಷ್ಟಿಕರ್ತ" ಎಂದು ಹೇಳುತ್ತಾರೆ.

**ಪಾಂಚರಾತ್ರರು** ಹೇಳುವುದೆನೆಂದರೆ: ಭಗವಾನ್ ವಾಸುದೇವನೇ ಬ್ರಹ್ಮ. ಅವನೇ ಸೃಷ್ಟಿಕರ್ತ. ವಾಸುದೇವನು ಜ್ಞಾನ, ಬಲ, ವೀರ್ಯ, ಐಶ್ವರ್ಯ, ಶಕ್ತಿ ಮತ್ತು ತೇಜಸ್ ಎಂಬ ಷಡ್‌ಗುಣಗಳಿಂದ ಕೂಡಿ ಷಡ್‌ಗುಣ್ಯೈಶ್ವರ್ಯ ಸಂಪನ್ನನಾಗಿದ್ದಾನೆ. ಆ ಗುಣಗಳ ವಿವರಣೆ ಹೀಗಿದೆ-

೧. **ಜ್ಞಾನ** - ಜಗತ್ತಿನಲ್ಲಿರುವ ಸಮಸ್ತ ವಸ್ತುಗಳನ್ನು ಸಮಗ್ರವಾಗಿ ತಿಳಿದಿರುವುದು.
೨. **ಬಲ** - ಜಗತ್ತನ್ನು ನಿರ್ಮಿಸುವಾಗ ಯಾವ ಶ್ರಮವೂ ಆಗದಿರುವುದು.
೩. **ವೀರ್ಯ** - ಮೊಸರಿಗೆ ಹಾಲು ಇದ್ದಂತೆ ಸಮಸ್ತ ಜಗತ್ತಿಗೂ ತಾನೇ

ಪ್ರಕೃತಿಯಾದರೂ ಯಾವ ವಿಕಾರವೂ ತನ್ನಲ್ಲಿ ಆಗದೆಯೇ ಜಗತ್ತಾಗುವುದು. ಆದರೆ ಹಾಲು ವಿಕಾರವನ್ನು ಹೊಂದಿಯೇ ಮೊಸರಾಗುತ್ತದೆ. ಪ್ರಕೃತಿಯಾದ ವಾಸುದೇವನಲ್ಲಿ ಯಾವ ವಿಕಾರವೂ ಆಗುವುದಿಲ್ಲ.

೪. **ಐಶ್ವರ್ಯ** – ವಾಸುದೇವನ ಇಚ್ಛೆಗೆ ಯಾವ ಅಡ್ಡಿಯೂ ಎಂದಿಗೂ ಆಗದಿರುವುದು.

೫. **ಶಕ್ತಿ** – ಜಗತ್ತಿಗೆ ಮೂಲ ಕಾರಣನಾಗುವ ಸಾಮರ್ಥ್ಯ.

೬. **ತೇಜಸ್** – ತನ್ನ ಕಾರ್ಯಕ್ಕೆ ಯಾರ ಸಹಾಯವನ್ನು ಪಡೆಯದೆಯೇ ಆ ಕಾರ್ಯವನ್ನು ನೆರವೇರಿಸುವ ಸಾಮರ್ಥ್ಯ.

ಈ ಆರು ಗುಣಗಳಿರುವುದರಿಂದ ವಾಸುದೇವನು ಭಗವಾನ್ ಆಗಿದ್ದಾನೆ. ಈ ವಾಸುದೇವ ಭಗವಂತನಿಂದ ಸಂಕರ್ಷಣನು ಹುಟ್ಟುತ್ತಾನೆ. ಇವನು ಸಮಸ್ತ ಜೀವಾಭಿಮಾನಿಯಾದ ಸಮಷ್ಟಿ ಜೀವನಾಗಿದ್ದಾನೆ. ಈ ಸಂಕರ್ಷಣನಿಂದ ಪ್ರದ್ಯುಮ್ನನು ಹುಟ್ಟುತ್ತಾನೆ. ಸಮಸ್ತ ಜೀವಾಭಿಮಾನಿಯಾದ ಸಮಷ್ಟಿ ಮನಸ್ಸಿಗೆ ಪ್ರದ್ಯುಮ್ನ ಎಂದು ಸಂಜ್ಞೆ. ಇವನಿಂದ ಎಂದರೆ ಈ ಸಮಷ್ಟಿ ಮನಸ್ಸಿನಿಂದ ಅನಿರುದ್ಧನು ಹುಟ್ಟುತ್ತಾನೆ. ಎಲ್ಲ ಜೀವರ ಅಹಂಕಾರಗಳಿಗೂ ಅಭಿಮಾನಿಯಾದ ಸಮಷ್ಟಿ ಅಹಂಕಾರಕ್ಕೆ ಅನಿರುದ್ಧ ಎಂದು ಸಂಜ್ಞೆ. ಹೀಗೆ ವಿಸ್ತೃತವಾದ ಜೀವ ಜಗತ್ತುಗಳಿಗೆ ಮೂಲ ಕಾರಣನಾದವನು ಭಗವಾನ್ ವಾಸುದೇವ. ವಾಸುದೇವನಿಗೂ ಅಖಿಲ ಜೀವ ಜಗತ್ತುಗಳಿಗೂ ಭೇದ ಸಹಿಷ್ಣುವಾದ ಅಭೇದವಿದೆ. ಮೋಕ್ಷವಾಗುವವರೆಗೆ ಜೀವನು ವಾಸುದೇವನಿಗಿಂತ ಭಿನ್ನನಾಗಿರುತ್ತಾನೆ. ಮೋಕ್ಷವಾದಾಗ ಜೀವನು ವಾಸುದೇವನಲ್ಲಿ ಅಭೇದದಿಂದ ಕೂಡಿ ಹೋಗುತ್ತಾನೆ. ಇದು ಪಾಂಚರಾತ್ರರ ಮತ.

ಇನ್ನು ಜೈನ ಮತದಲ್ಲಿ ಜೀವಾತ್ಮನು ವಿಭುವೂ ಅಲ್ಲ, ಅಣುವೂ ಅಲ್ಲ. ಆತ್ಮನು ತನ್ನ ಶರೀರವನ್ನು ವ್ಯಾಪಿಸುವ ಸ್ವಭಾವದವನಾದ್ದರಿಂದ ಶರೀರದ ಪ್ರಮಾಣವನ್ನು ಅನುಸರಿಸಿ ಹಿಗ್ಗುತ್ತಾನೆ. ಅಂತೆಯೇ ಕುಗ್ಗುತ್ತಾನೆ. ಆನೆಯ ಶರೀರದಲ್ಲಿ ಆನೆಯಂತೆ ದೊಡ್ಡ ಆಕೃತಿಯವನೂ ಇರುವೆಯ ಶರೀರದಲ್ಲಿ ಇರುವೆಯಂತೆ ಚಿಕ್ಕವನೂ ಆಗುತ್ತಾನೆ. ಮನುಷ್ಯನ ದೇಹವು ಯೌವನದಲ್ಲಿ ದೊಡ್ಡದಾಗುತ್ತಾ ಹೋಗುವಂತೆ ಆತ್ಮನೂ ಬೆಳೆಯುತ್ತಾನೆ. ಮನುಷ್ಯನು ವೃದ್ಧನಾದಾಗ ದೇಹವು ಕುಗ್ಗಿದಂತೆ ಆತ್ಮನೂ ಕುಗ್ಗುತ್ತಾನೆ. ಜೈನಸಿದ್ಧಾಂತದಲ್ಲಿ

ಸೃಷ್ಟಿಕರ್ತನಾದ ದೇವರಿಲ್ಲ. ಜಗತ್ತು ಸತ್ಯವಾದದ್ದು. ಜ್ಞಾನಿಯಾದ ಆತ್ಮವೇ ಪರಮೇಶ್ವರ. ಇಂದ್ರ ಮುಂತಾದ ದೇವತೆಗಳು ಅವರ ಸತ್ಕರ್ಮದ ಫಲವಾಗಿ ಉನ್ನತ ಸ್ಥಾನವನ್ನೇರಿದ್ದಾರೆ. ಆದರೆ ಅವರು ಜ್ಞಾನಿಗಳಲ್ಲವಾದ್ದರಿಂದ ಮುಕ್ತರಲ್ಲ. ಮುಕ್ತರಾದವರು ಲೋಕಾಕಾಶದ ಮೇಲಿರುವ ಸಿದ್ಧಶಿಲೆಯಲ್ಲಿ ವಿಶ್ರಮಿಸುತ್ತ ವಿರಾಜಿಸುತ್ತಾರೆ. ಅವರಿಗೆ ಪುನರ್ಜನ್ಮವಿಲ್ಲ. ಇವರ ಮತದಲ್ಲಿ ಜಗತ್ತು ಸತ್ಯ, ಕರ್ಮವೇ ಫಲವನ್ನು ಕೊಡುತ್ತದೆ – ಇತ್ಯಾದಿ.

ವೈದಿಕರಾದ **ಮೀಮಾಂಸಕರೂ** ಸಹ ಸರ್ವಜ್ಞನೂ ಸೃಷ್ಟಿಕರ್ತನೂ ಆದ ಈಶ್ವರನನ್ನು ಒಪ್ಪುವುದಿಲ್ಲ. ಈಶ್ವರನಿಲ್ಲವೆಂದೇ ಹೇಳುತ್ತಾರೆ. ಕರ್ಮವೇ ಶುಭಾಶುಭ ಫಲಗಳನ್ನು ಕೊಡಲು ಸಮರ್ಥವಾಗಿದೆ. ವೇದದಲ್ಲಿ ಕರ್ಮಕಾಂಡವೇ ಮುಖ್ಯವೂ ಪ್ರಮಾಣಭೂತವೂ ಆದದ್ದು. ಬ್ರಹ್ಮ, ಈಶ್ವರ, ಮುಂತಾದವರ ಪ್ರತಿಪಾದನೆ ವೇದದಲ್ಲಿದ್ದರೂ ಅದು ವೇದಕ್ಕೆ ಮುಖ್ಯವಾದ ತಾತ್ಪರ್ಯವಿಷಯವಲ್ಲ. ಅವರ ಉಪಾಸನೆಯಿಂದ ಚಿತ್ತಶುದ್ಧಿ ಆಗಬಹುದು. ಈಶ್ವರನ ಉಪಾಸನೆಯನ್ನು ಹೇಳುವ ವಾಕ್ಯಕ್ಕೆ ಆರೋಪಿಸಿ ಉಪಾಸನೆ ಮಾಡಬೇಕೆಂದು ತಾತ್ಪರ್ಯ. ಉದಾಹರಣೆಗೆ "ವಾಚಂ ಧೇನುಮುಪಾಸೀತ" ಎಂಬ ವೇದ ವಾಕ್ಯವಿದೆ. ಶಬ್ದವನ್ನು ಹಸುವೆಂದು ತಿಳಿದು ಉಪಾಸನೆ ಮಾಡಬೇಕು ಎಂದರ್ಥ. ಶಬ್ದವು ಹೇಗೆ ಹಸುವಾಗುತ್ತದೆ? ಆದ್ದರಿಂದ ಶಬ್ದದಲ್ಲಿ ಧೇನುತ್ವವನ್ನು ಆರೋಪಿಸಿ ಹಸುವೆಂದು ತಿಳಿದುಕೊಳ್ಳುವುದು ಆರೋಪ. ಒಟ್ಟಿನಲ್ಲಿ ವೇದವೆಲ್ಲವೂ ಕರ್ಮಪರವಾದದ್ದು. ಯಜ್ಞಯಾಗಾದಿಗಳನ್ನು ಮಾಡಿ ಉತ್ತಮ ಫಲವನ್ನು ಪಡೆದು ಸುಖಿಗಳಾಗಬೇಕೆಂದೇ ವೇದವು ಬೋಧಿಸುತ್ತದೆ. ಇದು ಮೀಮಾಂಸಕರ ಅಭಿಪ್ರಾಯ.

ಸರ್ವಜ್ಞನಾದ ಈಶ್ವರನಿದ್ದಾನೆಂದು **ತಾರ್ಕಿಕರ** ಮತ. ಈಶ್ವರನ ಜ್ಞಾನ ಇಚ್ಛಾ ಪ್ರಯತ್ನಗಳು ನಿತ್ಯವಾದವು. ಅದ್ಭುತವಾದ ಈ ವಿಶ್ವವನ್ನು ನಿರ್ಮಿಸಲು ಈಶ್ವರನಲ್ಲದೆ ಇನ್ನು ಯಾವ ಜೀವನಿಗೂ ಸಾಧ್ಯವಿಲ್ಲ. ಆದ್ದರಿಂದ ಈಶ್ವರನನ್ನು ಒಪ್ಪಲೇ ಬೇಕಾಗುತ್ತದೆ. ನಾನಾ ವಿಧವಾದ ಕರ್ಮಫಲ ಸುಖದುಃಖಗಳು ಲೋಕದಲ್ಲಿ ಕಂಡುಬರುತ್ತವೆಯಾದ್ದರಿಂದ ಇವುಗಳನ್ನು ಅನುಭವಿಸತಕ್ಕ ಜೀವಾತ್ಮರು ಅನಂತ ಸಂಖ್ಯೆಯಲ್ಲಿ ಇದ್ದಾರೆ ಎಂದು ಈ ತಾರ್ಕಿಕರ ಸಿದ್ಧಾಂತವಿದೆ.

**ಸೌಗತರೆಂದರೆ** ಬೌದ್ಧರು. ಅವರ ಸಿದ್ಧಾಂತ ಹೀಗಿದೆ. ಪ್ರತಿಯೊಂದು

ವಸ್ತುವೂ ದುಃಖರೂಪವಾದದ್ದು. ಈಗಲ್ಲದಿದ್ದರೆ ಆಮೇಲಾದರೂ ಅದು ದುಃಖವನ್ನುಂಟುಮಾಡುತ್ತದೆ. ಎಲ್ಲ ವಸ್ತುವೂ ಸಲಕ್ಷಣ. ಇತರರು ಇದನ್ನು ಒಪ್ಪುವುದಿಲ್ಲ. ಎಲ್ಲಾ ವಸ್ತುವೂ ತಾನು ಮಾತ್ರ ಗೋಚರಿಸುತ್ತದೆಯೇ ಹೊರತು ಯಾವ ಧರ್ಮದಿಂದಲೂ ಕೂಡಿದ್ದಾಗಿ ಗೋಚರಿಸುವುದಿಲ್ಲ. ಈ ಮಾತನ್ನು ಸ್ವಲ್ಪ ವಿವರಿಸಬೇಕಾಗಿದೆ. ಪ್ರತಿಯೊಂದು ಪದಾರ್ಥವು ಒಂದಾನೊಂದು ಧರ್ಮದಿಂದ ಕೂಡಿರುತ್ತದೆ. ಈ ಧರ್ಮಕ್ಕೆ ಪ್ರವೃತ್ತಿನಿಮಿತ್ತ ಎನ್ನುತ್ತಾರೆ. ಜಾತಿ, ಗುಣ, ಕ್ರಿಯೆ ಇವು ಮೂರು ಪ್ರವೃತ್ತಿನಿಮಿತ್ತಗಳು. ಮನುಷ್ಯ, ಘಟ ಮುಂತಾದವುಗಳಲ್ಲಿ ಮನುಷ್ಯತ್ವ, ಘಟತ್ವ ಮೊದಲಾದ ಜಾತಿಗಳಿವೆ. ಕರಿಯದು, ಬಿಳಿಯದು ಮುಂತಾದ ವಸ್ತುಗಳಲ್ಲಿ ಕಪ್ಪು ಬಿಳುಪು ಮುಂತಾದ ಗುಣಗಳಿವೆ. ಪಾಚಕ ಗಾಯಕ ಮೊದಲಾದವರಲ್ಲಿ ಅಡಿಗೆ ಮಾಡುವ ಕ್ರಿಯೆ, ಹಾಡುವ ಕ್ರಿಯೆ ಮುಂತಾದವು ಇರುತ್ತವೆ. ಹೀಗೆ ಯಾವ ಶಬ್ದವನ್ನು ಹೇಳಿದರೂ ತೋರುವ ಅರ್ಥದಲ್ಲಿ ಜಾತಿ, ಗುಣ, ಕ್ರಿಯೆಗಳಲ್ಲೊಂದು ಅವಶ್ಯ ತೋರುತ್ತದೆಯೆಂದು ತಾರ್ಕಿಕರೇ ಮೊದಲಾದವರ ಸಿದ್ಧಾಂತವಿದೆ. ಬೌದ್ಧರಾದರೋ ಆ ಪ್ರವೃತ್ತಿ ನಿಮಿತ್ತಗಳು ತೋರುವುದಿಲ್ಲ. ಅವುಗಳಿಂದ ಕೂಡಿದ ವ್ಯಕ್ತಿಯೇ ನೇರವಾಗಿ ಗೋಚರಿಸುತ್ತದೆ ಎನ್ನುತ್ತಾರೆ. ಆದ್ದರಿಂದ ಎಲ್ಲ ವಸ್ತುವೂ ಸ್ವಲಕ್ಷಣ. ಪ್ರತಿಯೊಂದು ಜ್ಞಾನವೂ ಕ್ಷಣಿಕ. ಇದು ವಸ್ತು ಸ್ಪರ್ಶವಿಲ್ಲದೆ ಸ್ವತಂತ್ರವಾಗಿ ಹೊಳೆಯುತ್ತಾ ಜ್ಞಾನಸಂತತಿ ಆಗುವುದು. ಈ ಜ್ಞಾನಸಮುದಾಯವೇ ಆತ್ಮ. ಇದೇ ಈಶ್ವರ ಎಂದಾದರೂ ತಿಳಿಯಬಹುದು. ಪ್ರತ್ಯೇಕವಾಗಿ ಯಾವ ಈಶ್ವರನೂ ಇಲ್ಲ ಎನ್ನುತ್ತಾರೆ.

ಇನ್ನು ಪತಂಜಲಿಯ ಯೋಗಶಾಸ್ತ್ರವನ್ನನುಸರಿಸುವ **ಪಾತಂಜಲರು** ಸರ್ವಜ್ಞನಾದ ಈಶ್ವರನನ್ನು ಅಂಗೀಕರಿಸಿದ್ದಾರೆ. ಅವಿದ್ಯಾಕ್ಲೇಶಕರ್ಮಾದಿಗಳು ಯಾವುವೂ ಈಶ್ವರನಿಗೆ ಇಲ್ಲ. ಜೀವಾತ್ಮರು ಈಶ್ವರನಿಗಿಂತ ಬೇರೆಯಾದವರು. ಇವರು ಸಂಸಾರಿಗಳು. ಪ್ರಧಾನವೇ ಜಗತ್ತಿನ ಸಕಲ ಕಾರ್ಯಗಳನ್ನು ನಿರ್ವಹಿಸುತ್ತದೆ ಎನ್ನುವ ಈ ಪಾತಂಜಲರು ಈಶ್ವರನನ್ನು ಅಂಗೀಕರಿಸಿದ ಸಾಂಖ್ಯರೆನ್ನಬಹುದು. ಕಾಪಿಲ-ಸಾಂಖ್ಯ ಮತದವರು ಈಶ್ವರನನ್ನು ಅಂಗೀಕರಿಸುವುದಿಲ್ಲ. ಪಾತಂಜಲರು ಅಂಗೀಕರಿಸುತ್ತಾರೆಂಬುದೇ ಭೇದ. ಆದ್ದರಿಂದ ಈ ಪಾತಂಜಲರನ್ನು ಸೇಶ್ವರಸಾಂಖ್ಯರೆಂದೂ ಹೇಳುತ್ತಾರೆ.

ಇನ್ನು ವೇದಾಂತಿಗಳಾದ **ಅದ್ವೈತಿಗಳ** ಸಿದ್ಧಾಂತದಲ್ಲಿ ಅದ್ವಿತೀಯ

ಪರಮಾನಂದವೇ ಬ್ರಹ್ಮ. ಅದೇ ಜೀವದ ವಾಸ್ತವ ಸ್ವರೂಪ. ಜಗತ್ತು ಮಾಯಾಕಲ್ಪಿತವಾದದ್ದು. ಈಶ್ವರನು ಸರ್ವಜ್ಞನೆನ್ನುವುದು ಮಾಯಾಕಲ್ಪಿತವಾದ ಸರ್ವಜಗತ್ತೂ ಇರುವುದರಿಂದ. ಮಾಯಾವಿಶಿಷ್ಟ ಬ್ರಹ್ಮಕ್ಕೆ ಸೃಷ್ಟಿಕರ್ತನಾದ ಈಶ್ವರನೆಂದೂ ಹೆಸರು. ಮಾಯೆಗೆ ಈಶ್ವರನು ಪ್ರಭು. ಮಾಯೆಗೆ ಅಧೀನನಾದ ಜೀವನು ಅಲ್ಪಜ್ಞನಾಗಿದ್ದಾನೆ. ಜಗತ್ತೆಲ್ಲವೂ ಮಾಯಾವಿಶಿಷ್ಟವಾದ ಈಶ್ವರನ ಕಲ್ಪಿತ ರೂಪವೇ ಆಗಿದೆ. ಶಾಸ್ತ್ರೀಯ ಭಾಷೆಯಲ್ಲಿ ಹೇಳುವುದಾದರೆ ಮಾಯಾವಿಶಿಷ್ಟನಾದ ಈಶ್ವರನು ಜಗತ್ತಿನ ಉಪಾದಾನಕಾರಣ. ಮಾಯೆಯ ಸಹಕಾರವನ್ನು ಪಡೆದ ಆತನೇ ಜಗತ್ತಿನ ನಿಮಿತ್ತ ಕಾರಣ. ಈ ಮತದಲ್ಲಿ ಮಾಯೆಯನ್ನು ಬದಿಗಿಟ್ಟಾಗ ಜೀವೇಶ್ವರರ ಸ್ವರೂಪವು ಒಂದೇ ಆಗಿ ಅಭೇದವು ಸಿದ್ಧಿಸುತ್ತದೆ. ಹೀಗೆ ನಾನಾ ಮತಗಳಿರುವಾಗ **ತತ್ತ್ವಮಸಿ** ಎಂಬ ವಾಕ್ಯದಲ್ಲಿ ತತ್‌ಪದದ ಅರ್ಥ ಯಾವುದು? ಎಂಬ ಸಂದೇಹ ಹುಟ್ಟುತ್ತದೆ. ಅದನ್ನು ನಿರ್ಣಯಿಸಿ ಹೇಳುವುದಕ್ಕಾಗಿ ಈ ಶ್ಲೋಕ ಹೊರಟಿದೆ–

**ನ ಸಾಂಖ್ಯಂ ನ ಶೈವಂ ನ ತತ್ ಪಾಂಚರಾತ್ರಂ**
**ನ ಜೈನಂ ನ ಮೀಮಾಂಸಕಾದೇರ್ಮತಂ ವಾ ।**
**ವಿಶಿಷ್ಟಾನುಭೂತ್ಯಾ ವಿಶುದ್ಧಾತ್ಮಕತ್ವಾತ್**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೪ ॥**

"ಸಾಂಖ್ಯ, ಶೈವ, ಪಾಂಚರಾತ್ರ ಮುಂತಾದ ಮತವಾವುದೂ ನನಗೆ ಸಂಮತವಲ್ಲ. ಅವು ಶ್ರುತಿಗೂ ಅನುಭವಕ್ಕೂ ವಿರುದ್ಧವಾದವು. ನಾನು ಅದಾವುದೂ ಅಲ್ಲವೆಂದು ಅವುಗಳಿಗೆ ವ್ಯತಿರಿಕ್ತವಾದ ಅನುಭವ ನನಗೆ ಬಂದಿದೆ. ವಿಶುದ್ಧಾತ್ಮಕತ್ವಾತ್ = ನಿರ್ವಿಕಲ್ಪವಾದ ಅದ್ವಿತೀಯ ಚೈತನ್ಯ ಸ್ವರೂಪನೇ ನಾನೆಂಬ ಸಾಕ್ಷಾತ್ಕಾರವಾಗಿರುವುದರಿಂದ ಕೇವಲ ಮಂಗಲ ಸ್ವರೂಪದ ಬ್ರಹ್ಮವೇ ಆಗಿದ್ದೇನೆ."

"ನ ಸಾಂಖ್ಯಂ ನ ಶೈವಂ...." ಎಂಬ ಈ ಶ್ಲೋಕದಲ್ಲಿ ಸಾಂಖ್ಯಾದಿ ಮತಗಳು ಅಂಗೀಕಾರಾರ್ಹಗಳಲ್ಲವೆಂದು ಅವನ್ನು ನಿಷೇಧಿಸಲಾಗಿದೆ. ಆ ಮತಗಳು ಉಪನಿಷತ್ತುಗಳಿಗೆ ವಿರುದ್ಧವಾದವು. ಅದೆಲ್ಲವನ್ನು ವಿವರಿಸಬೇಕಾದರೆ ಅನೇಕ ಪ್ರಮಾಣಗಳನ್ನು ಉದಾಹರಿಸಿ ನಾನಾ ಯುಕ್ತಿಗಳಿಂದ ಖಂಡಿಸಬೇಕಾಗುತ್ತದೆ. ಈ ಖಂಡನೆ ಮಂಡನೆಗಳು ಸಾಮಾನ್ಯ ಓದುಗರಿಗೆ ಅರ್ಥವಾಗುವುದಿಲ್ಲ ಮತ್ತು ಬೇಕಾಗುವುದೂ ಇಲ್ಲ. ಶ್ಲೋಕದ ಅರ್ಥವನ್ನು ಸ್ಪಷ್ಟವಾಗಿ ತಿಳಿದುಕೊಂಡರೆ ಸಾಕು ಎಂದು ಅವರ ಇಚ್ಛೆಯಾಗಿರುತ್ತದೆ. ಆದ್ದರಿಂದ

ಸರಳವಾದ ಅರ್ಥವನ್ನು ಮಾತ್ರ ನಿರೂಪಿಸಲಾಗುವುದು.

ಶ್ಲೋಕದಲ್ಲಿ " ವಿಶಿಷ್ಟಾನುಭೂತ್ಯಾ ವಿಶುದ್ಧಾತ್ಮಕತ್ವಾತ್" ಎಂದು ಹೇಳಿದೆ. ಇದರ ಅರ್ಥವೇನೆಂಬುದನ್ನು ನೋಡೋಣ. ವಿಶಿಷ್ಟವಾದ ನನ್ನ ಅನುಭವದಿಂದ ನಾನು ಅತ್ಯಂತ ಪರಿಶುದ್ಧನಾದ ಆತ್ಮನಾಗಿದ್ದೇನೆ. ಆದ್ದರಿಂದ ನಾನು ಮಂಗಳಸ್ವರೂಪನಾದ ಶಿವನೇ ಆಗಿದ್ದೇನೆ ಎಂದು ಸಮುದಿತಾರ್ಥ. ವಿಶಿಷ್ಟ ಶಬ್ದಕ್ಕೆ ವ್ಯಾವೃತ್ತ ಎಂದು ಅರ್ಥ. ಯುಕ್ತ ಎಂದು ಅರ್ಥವಲ್ಲ. ಎಲ್ಲ ವಿಕಲ್ಪಗಳಿಂದಲೂ ನಿವೃತ್ತವಾದ ಸ್ಥೂಲ, ಅಣು, ಹ್ರಸ್ವ, ದೀರ್ಘ, ಕಪ್ಪು, ಬಿಳುಪು ಮುಂತಾದ ಯಾವ ವಿಶೇಷಣವೂ ಇಲ್ಲದ ಬ್ರಹ್ಮವೇ ಆಗಿದ್ದೇನೆ. **ತದೇವ ನಿಷ್ಕಲಂ ಬ್ರಹ್ಮ ನಿರ್ವಿಕಲ್ಪಂ ನಿರಂಜನಂ** (ಬ್ರಹ್ಮ ಬಿಂದು ೮-೯) ಎಂದು ಶ್ರುತಿ ಇದೆ. ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ ಇತ್ಯಾದಿ ಶ್ರುತಿ ವಚನಗಳಿಂದ ಆ ಬ್ರಹ್ಮವೇ ನಾನು ಎಂಬುದು ಗೊತ್ತಾಗಿದೆ. ನಿರ್ವಿಕಲ್ಪಕವೆಂದರೆ ಯಾವ ವಿಶೇಷವು ಇಲ್ಲದ್ದು. ಇದು ಹೀಗಿದೆ ಎಂದು ಹೇಳಲು ಅಶಕ್ಯವಾದದ್ದು ಎಂದರ್ಥ. ಏವಂ ಚ ನಿರ್ವಿಕಲ್ಪಕಾದ್ವಿತೀಯ ಚೈತನ್ಯರೂಪನೇ ನಾನು ಎಂದರ್ಥ. ನನಗೆ ಈ ಪ್ರಕಾರವಾದ ಅನುಭವವೇ ಬಂದಿರುವುದರಿಂದ ಸಾಂಖ್ಯಾದಿಮತಗಳೆಲ್ಲವೂ ಅನುಭವವಿರುದ್ಧ ಮತ್ತು ಅಪ್ರಾಮಾಣಿಕ ಎಂದು ತಾತ್ಪರ್ಯ.

ಈ ಶ್ಲೋಕದಲ್ಲಿ ಬ್ರಹ್ಮವು ನಿರ್ವಿಕಲ್ಪಕವೆಂದು ಹೇಳಿದೆಯಷ್ಟೆ. ಇದರ ಮೇಲೆ ಒಂದು ಶಂಕೆ ಹುಟ್ಟುತ್ತದೆ. **ಸ ಯ ಏಷೋಽಣಿಮಾ** (ಛಾಂ. ೬-೮-೭) **ಅಣೋರಣೀಯಾನ್** (ಕಠ ೨-೨೦) ಇತ್ಯಾದಿ ಶ್ರುತಿಗಳಲ್ಲಿ ಪರಮಾತ್ಮನು ಅಣು ಪರಿಮಾಣನೆಂದು ಹೇಳಿದೆ. **ಅಂಗುಷ್ಠಮಾತ್ರಃ ಪುರುಷಃ** (ಕಠ ೪-೧೨) ಎಂಬಲ್ಲಿ ಜೀವನು ಅಂಗುಷ್ಠಪರಿಮಾಣನೆಂದು ಹೇಳಿದೆ. ಪರಮಾತ್ಮನು ಜೀವನಿಗೆ ಅಭಿನ್ನನಾದ್ದರಿಂದ ಪರಮಾತ್ಮನೂ ಅಂಗುಷ್ಠ ಪರಿಮಾಣನೆಂದೂ ಹೇಳಿದಂತಾಯಿತು. ಒಟ್ಟಿನಲ್ಲಿ ಬ್ರಹ್ಮವು ಗೊತ್ತಾದ ಪರಿಮಾಣವುಳ್ಳದ್ದೆಂದೂ ಸರ್ವವ್ಯಾಪಕವಲ್ಲವೆಂದೂ ಶ್ರುತಿಯೇ ಪ್ರತಿಪಾದಿಸಿದೆಯಾದ್ದರಿಂದ ಹಿಂದೆ ಹೇಳಿದುದು ಹೇಗೆ ಸರಿಯಾದೀತು? ಮತ್ತು ಅಂಗುಷ್ಠಮಾತ್ರನಾದ ಈ ಜೀವಾತ್ಮನು ಮಧ್ಯಮಪರಿಮಾಣದವನಾದ ಮೇಲೆ ಅವನು ನಿತ್ಯನಲ್ಲವೆಂದೂ ಆತನಿಗೆ ನಾಶವಾಗುತ್ತದೆಯೆಂದೂ ಸಿದ್ಧವಾಗುತ್ತದೆಯಲ್ಲವೇ? ಇದು ಶಂಕೆ.

ಇದಕ್ಕೆ ಸಮಾಧಾನವೇನೆಂದರೆ ಆತ್ಮನು ಅಣು ಎಂದರೆ ಆತ್ಮನು ಅತ್ಯಂತ

ಸೂಕ್ಷ್ಮನಾದವನು. ಆತನನ್ನು ಅರಿತುಕೊಳ್ಳುವುದು ಬಹಳ ಕಷ್ಟ ಎಂದರ್ಥ. ನಮ್ಮ ಹೃದಯವು ಅಂಗುಷ್ಠಪರಿಮಾಣವಾದದ್ದು. ಆತ್ಮನು 'ಹೃದಯೇ ಸಂನಿವಿಷ್ಟಃ' ಎಂದು ವರ್ಣಿಸುವುದುಂಟು. 'ಹೃದ್ದೇಶೇಽರ್ಜುನ ತಿಷ್ಠತಿ' ಎಂದು ಭಗವದ್ಗೀತೆಯಲ್ಲಿಯೇ ಹೇಳಿದೆ. ಹೃದಯದ ಪರಿಮಾಣವನ್ನು ಆತ್ಮನಲ್ಲಿ ಆರೋಪಿಸಿ 'ಅಂಗುಷ್ಠಮಾತ್ರಃ ಪುರುಷಃ' ಎಂದು ಕಠೋಪನಿಷತ್ತು ಹೇಳಿದೆ. ಮುಂಡಕೋಪನಿಷತ್ತು ಆತ್ಮನನ್ನು ವರ್ಣಿಸಿದ ಬಗೆಯನ್ನು ನೋಡಿ.

**ಬ್ರಹ್ಮೈವೇದಮಮೃತಂ ಪುರಸ್ತಾತ್ ಬ್ರಹ್ಮ ಪಶ್ಚಾತ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ॥** (ಮು. ೨-೨-೧೧) ಇತ್ಯಾದಿಯಾದ ಮಂತ್ರವು ಎದುರಿಗೆ, ಹಿಂದುಗಡೆ, ಬಲಕ್ಕೆ, ಎಡಕ್ಕೆ, ಮೇಲೆ, ಕೆಳಗೆ ಸರ್ವತ್ರ ಪ್ರಸೃತವಾದುದೆಲ್ಲವೂ ಬ್ರಹ್ಮವೇ ಆಗಿದೆ. ಈ ವಿಶ್ವವೆಲ್ಲವೂ ಬ್ರಹ್ಮವೇ ಎಂದು ಹೇಳಿದೆ. ಅಲ್ಲದೆ ಈ ಬ್ರಹ್ಮವಸ್ತುವಿಗೆ ಕಾರಣವಾದದ್ದು ಯಾವುದೂ ಇಲ್ಲ. ಅಖಂಡವಾದ ಈ ಬ್ರಹ್ಮದ ನಡುವೆ ಇನ್ನಾವುದೂ ಇಲ್ಲ ಎಂದು ಸಾರುತ್ತದೆ. ಬ್ರಹ್ಮವು ಅಪರಿಚ್ಛಿನ್ನವಾದ್ದರಿಂದ ಅದು ನಿರ್ವಿಶೇಷ ಎಂದು ಗೊತ್ತಾಗುತ್ತದೆ. ಆದ್ದರಿಂದ ಪೂರ್ವೋಕ್ತವಾದ ಶಂಕೆಗೆ ಆಸ್ಪದವಿಲ್ಲ. ಇದನ್ನು ದೃಢಪಡಿಸುವುದಕ್ಕಾಗಿ ಮುಂದಿನ ಶ್ಲೋಕವು ಹೊರಟಿದೆ.

**ನ ಚೋರ್ಧ್ವಂ ನ ಚಾಧೋ ನ ಚಾಂತರ್ನಬಾಹ್ಯಂ**
**ನ ಮಧ್ಯಂ ನ ತಿರ್ಯಙ್ ನ ಪೂರ್ವಾಪರಾ ದಿಕ್ ।**
**ವಿಯದ್ವ್ಯಾಪಕತ್ವಾದಖಂಡೈಕರೂಪಃ**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೫ ॥**

ಈ ಶ್ಲೋಕದ ಪೂರ್ವಾರ್ಧದ ಅರ್ಥವನ್ನು ಹೇಳಿದ್ದಾಗಿದೆ. ವಿಯದ್ವ್ಯಾಪಕತ್ವಾತ್ = ಆಕಾಶದಂತೆ ಸರ್ವವ್ಯಾಪಕನಾದ್ದರಿಂದ ನಾನು ಮೇಲೆ, ಕೆಳಗೆ ಮುಂತಾದ ಸ್ಥಳದಲ್ಲಿ ಮಾತ್ರ ಇರತಕ್ಕವನಲ್ಲ. **ಆಕಾಶವತ್ಸರ್ವಗತಶ್ಚ ನಿತ್ಯಃ** ಎಂದು ಶ್ರುತಿಯು ಹೇಳಿದೆ. ಅಥವಾ ಆಕಾಶವನ್ನು ವ್ಯಾಪಿಸಿರತಕ್ಕವನಾದ್ದರಿಂದ ಎಂದರ್ಥ. **ಜ್ಯಾಯಾನ್ ಅಂತರಿಕ್ಷಾತ್** ಎಂದು ಛಾಂದೋಗ್ಯವು ಹೇಳಿದೆ. (ಛಾಂ.೩-೧೪-೩). ಹಾಗಾದರೆ 'ಅಣೋರಣೀಯಾನ್' ಎಂದು ಹಿಂದೆ ಹೇಳಿದ್ದು ಹೇಗೆ? 'ಮಹತೋ ಮಹೀಯಾನ್' ಎಂದು ಅದೇ ಶ್ರುತಿ ಹೇಳಿದೆಯಲ್ಲ ! ವಸ್ತುತಃ ಉಪಾಧಿ ಧರ್ಮವನ್ನು ಆರೋಪಿಸಿ ಅಣು ಎಂಬ ವರ್ಣನೆ ಬಂದಿದೆ. ಅಂತಃಕರಣ ವಿಶಿಷ್ಟನಾದ ಆತ್ಮನೇ ಜೀವ. ಅಂತಕರಣವು

ಸೂಕ್ಷ್ಮವಾದುದರಿಂದ ಆತ್ಮನು ಸೂಕ್ಷ್ಮನೆಂಬ ಅರ್ಥದಲ್ಲಿ ಅಣು ಎಂದು ಹೇಳಿರುವುದುಂಟು.

ಈಗ ಇನ್ನೊಂದು ಪ್ರಶ್ನೆ. ಬ್ರಹ್ಮವು ಜಗತ್ತಿಗೆ ಉಪಾದಾನ ಕಾರಣವೆಂದು ವೇದಾಂತವು ಹೇಳುತ್ತದೆ. ಮಣ್ಣು ಗಡಿಗೆಗೆ ಉಪಾದಾನ ಕಾರಣ. ಮಣ್ಣಿನ ಕಪ್ಪು ಬಣ್ಣ ಕೆಂಪು ಬಣ್ಣ ಮುಂತಾದ ಗುಣಗಳು ಅದರಿಂದ ಹುಟ್ಟಿದ ಗಡಿಗೆಯಲ್ಲಿರುತ್ತವೆ. ಗಡಿಗೆಯ ಬಣ್ಣ ಮೊದಲಾದವು ಮಣ್ಣಿನಲ್ಲಿರುತ್ತವೆ. ಮಣ್ಣಿಗೂ ಗಡಿಗೆಗೂ ಅಭೇದವಿರುವುದೇ ಇದಕ್ಕೆ ನಿಮಿತ್ತ. ಜಗತ್ತು ನಾನಾ ದುಃಖಗಳಿಂದ ತುಂಬಿದೆ. ಸುಖವು ಇದ್ದರೂ ಅತ್ಯಲ್ಪವೇ ಸರಿ. ಬ್ರಹ್ಮ ಮತ್ತು ಜಗತ್ತು ಇವು ಅಭಿನ್ನವಾದವು. 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ಸ್ಮೃತಿಗಳು ಈ ಅಭೇದವನ್ನೇ ಹೇಳುತ್ತವೆ. ಆದ್ದರಿಂದ ಜಗತ್ತಿನಲ್ಲಿರುವ ದುಃಖವು ಬ್ರಹ್ಮದಲ್ಲೂ ಇದೆ ಎಂದು ಹೇಳಬೇಕಾಗುತ್ತದೆ. ಅಲ್ಲಿಗೆ ಮೋಕ್ಷವು ದುಃಖವಿಶಿಷ್ಟವೇ ಆಯಿತು. ಈ ದುಃಖವು ಸ್ವಭಾವಸಿದ್ಧವಾದ್ದರಿಂದ, ಬೆಂಕಿಯಿಂದ ಉಷ್ಣತೆಯನ್ನು ಹೇಗೆ ಬೇರೆ ಮಾಡಲಾಗುವುದಿಲ್ಲವೋ ಹಾಗೆ ದುಃಖವು ಬ್ರಹ್ಮದಲ್ಲಿ ಬದಲಾವಣೆಯಾಗದೆ ಇದ್ದೇ ಇರುತ್ತದೆ. ಏವಂಚ ಆನಂದರೂಪವಾದ ಮೋಕ್ಷವು ಸಿದ್ಧಿಸುವುದೇ ಇಲ್ಲವಲ್ಲ? ಈ ಪ್ರಶ್ನೆಗೆ ಉತ್ತರವಾಗಿ ಮುಂದಿನ ಶ್ಲೋಕ ಹೊರಟಿದೆ.

**ನ ಶುಕ್ಲಂ ನ ಕೃಷ್ಣಂ ನ ರಕ್ತಂ ನ ಪೀತಂ**
**ನ ಕುಬ್ಜಂ ನ ಪೀನಂ ನ ಹ್ರಸ್ವಂ ನ ದೀರ್ಘಂ ।**
**ಅರೂಪಂ ತಥಾ ಜ್ಯೋತಿರಾಕಾರಕತ್ವಾತ್**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೭ ॥**

"ನಾನು ಬಿಳಿಯ ಬಣ್ಣದವನಲ್ಲ, ಕರಿಯನೂ ಅಲ್ಲ, ಕೆಂಪೂ ಅಲ್ಲ, ಹಳದಿಯೂ ಅಲ್ಲ. ನಾನು ಕುಬ್ಜನಲ್ಲ ಎಂದರೆ ಅಣು ಪರಿಮಾಣದವನೂ ಅಲ್ಲ. ಮಹಾ ಪರಿಮಾಣನೂ ಅಲ್ಲ. ಗಿಡ್ಡನೂ ಅಲ್ಲ, ಉದ್ದದವನೂ ಅಲ್ಲ."

ನಾಲ್ಕು ಬಣ್ಣಗಳನ್ನು ನಿಷೇಧಿಸಿರುವುದು ಎಲ್ಲ ಬಣ್ಣಗಳ ನಿಷೇಧಕ್ಕೂ ಉಪಲಕ್ಷಣ. ಈ ಬಣ್ಣಗಳೂ ಪೃಥ್ವಿಯೇ ಮುಂತಾದ ಮಹಾಭೂತಗಳಲ್ಲಿ ಇರತಕ್ಕವಾದ್ದರಿಂದ ಪಂಚಮಹಾಭೂತಗಳೂ ಆತ್ಮನಲ್ಲ ಎಂದು ಹೇಳಿದಂತಾಯಿತು. ಅಣು ಮುಂತಾದ ನಾಲ್ಕು ವಿಧ ಪರಿಮಾಣಗಳನ್ನು ನಿಷೇಧಿಸಿದ್ದರಿಂದ ಆತ್ಮನು ಒಂದು ದ್ರವ್ಯವಲ್ಲ ಎಂದು ಸಿದ್ಧವಾಗುತ್ತದೆ. ದ್ರವ್ಯ,

ಗುಣ. ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವ- ಎಂಬ ಸಪ್ತಪದಾರ್ಥಗಳನ್ನು ತಾರ್ಕಿಕರು ಅಂಗೀಕರಿಸಿದ್ದಾರೆ. ಆತ್ಮನು ದ್ರವ್ಯವಾದರೆ ಅವನಲ್ಲಿ ಗುಣಕರ್ಮಗಳಿರಬೇಕಾಗುತ್ತದೆ. ಕರ್ಮವೆಂದರೆ ಕ್ರಿಯೆ. ಒಂದು ವೇಳೆ ಕರ್ಮವಿಲ್ಲದಿದ್ದರೆ ಗುಣವು ಇರಲೇಬೇಕು. ಆತ್ಮನಲ್ಲಿ ಯಾವ ಬಗೆಯ ಗುಣವಾಗಲಿ ಕ್ರಿಯೆಯಾಗಲಿ ಇಲ್ಲವೆಂದು ವೇದಾಂತದ ಸಿದ್ಧಾಂತವಾಗಿದೆ. ಹಾಗಾದರೆ ಆತ್ಮನು ಯಾವ ಪದಾರ್ಥ ಎಂಬ ಪ್ರಶ್ನೆಗೆ ಭಾವಪದಾರ್ಥ ಎಂದು ವೇದಾಂತಿಗಳ ಉತ್ತರ. ತಾರ್ಕಿಕರ ಪದಾರ್ಥವಿಭಾಗ, ದ್ರವ್ಯ ಲಕ್ಷಣಗಳನ್ನು ವೇದಾಂತಿಗಳು ಅಂಗೀಕರಿಸುವುದಿಲ್ಲ. ಅದನ್ನು ತಿಳಿಸುವುದಕ್ಕಾಗಿ 'ಅರೂಪಂ' ಎಂಬ ಶಬ್ದವು ಈ ಪದ್ಯದಲ್ಲಿದೆ. ರೂಪ್ಯತೇ ಭಾಸ್ಯತೇ ಇತಿ ರೂಪಂ ಎಂದು ರೂಪಶಬ್ದದ ನಿಷ್ಪತ್ತಿ. ಪ್ರಮೇಯ ಎಂದರ್ಥ. ಅರೂಪವೆಂದರೆ ಅಪ್ರಮೇಯ. ನಮ್ಮ ಇಂದ್ರಿಯಗಳಿಗಾಗಲಿ ಮನಸ್ಸಿಗಾಗಲಿ ಗೋಚರನಾಗತಕ್ಕವನಲ್ಲ. ಆತ್ಮನು ಶುದ್ಧಜ್ಞಾನಸ್ವರೂಪನೂ, ಸ್ವಯಂಪ್ರಕಾಶನೂ ಆಗಿದ್ದಾನೆ. ತಾರ್ಕಿಕಾದಿವಾದಿಗಳು ಒಪ್ಪುವ ಯಾವ ಪದಾರ್ಥವು ಅಲ್ಲವೆಂದು ಸಿದ್ಧವಾಗುತ್ತದೆ. **ಅಸ್ಥೂಲಮನಣು ಅಹ್ರಸ್ವಮದೀರ್ಘಮಲೋಹಿತಂ** (ಬೃಹ.೩-೮-೮). **ಅಶಬ್ದಮಸ್ಪರ್ಶಮರೂಪಮವ್ಯಯಂ। ತಥಾರಸಂ ನಿತ್ಯಮಗಂಧವಚ್ಚ ಯತ್** (ಕಠ.೩-೧೫) ಎಂದು ಉಪನಿಷತ್ತುಗಳು ಹೇಳುತ್ತವೆ. 'ಏತದಪ್ರಮೇಯಂ ಧ್ರುವಮ್' ಎಂದು ಬೃಹದಾರಣ್ಯಕವೇ ತಿಳಿಸಿದೆ. ಜ್ಯೋತಿರಾಕಾರಕತ್ವಾತ್ ಎಂಬುದು ಪೂರ್ವೋಕ್ತ ವಿಷಯವನ್ನು ಸಾಧಿಸುವ ಹೇತು. ಆತ್ಮನು ಜ್ಯೋತಿರಾಕಾರದವನು. ಸ್ವಯಂಪ್ರಕಾಶನಾದ ಜ್ಞಾನಸ್ವರೂಪನೆಂದರ್ಥ. ಆದ್ದರಿಂದ **"ಶಿವಃ ಕೇವಲೋಽಹಮ್"**

ಈಗ ಇನ್ನೊಂದು ಪ್ರಶ್ನೆ. ನೀನು ಬ್ರಹ್ಮವಾಗಿದ್ದೀಯೆ – ಎಂದು ಬ್ರಹ್ಮ ಭಾವವನ್ನು ಉಪದೇಶಿಸುವುದು ಯಾರಿಗೆ? ಬ್ರಹ್ಮವಾಗಿರುವವನಿಗೋ? ಅಥವಾ ಬ್ರಹ್ಮವಾಗದೆ ಇರುವವನಿಗೋ? ಬ್ರಹ್ಮವಾಗಿರುವವನಿಗೆ ಉಪದೇಶಿಸುವುದು ವ್ಯರ್ಥ. ಮನುಷ್ಯನಿಗೆ ನೀನು ಮನುಷ್ಯ ಎಂದಾಗಲಿ, ಗಂಡಸಿಗೆ ನೀನು ಗಂಡಸು ಎಂದಾಗಲಿ ಯಾರೂ ಹೇಳಿಕೊಡುವುದಿಲ್ಲ. ಹಾಗೆ ಹೇಳುವುದು ವ್ಯರ್ಥವೇ. ಇನ್ನು ಬ್ರಹ್ಮನಲ್ಲದವನಿಗೆ ಎಂದರೆ ಅದೂ ವ್ಯರ್ಥವೇ. "ಸತ್ಯಂ ಜ್ಞಾನಮನಂತಂ ಬ್ರಹ್ಮ" (ತೈ.೨-೧-೧) ಎಂದು ಶ್ರುತಿಯಲ್ಲಿರುವುದರಿಂದ ಬ್ರಹ್ಮವಲ್ಲದ್ದು ಸತ್ಯವಸ್ತುವೇ ಅಲ್ಲವೆಂದೂ ಜ್ಞಾನಭಿನ್ನವಾದ್ದರಿಂದ ಜಡವೆಂದೂ ಸಿದ್ಧವಾಗುತ್ತದೆ. ಹೀಗೆ ಮಿಥ್ಯಾವಸ್ತುವೂ ಜಡವೂ ಆದುದಕ್ಕೆ 'ನೀನು ಬ್ರಹ್ಮ' ಎಂದು

ಉಪದೇಶಿಸುವುದು ವ್ಯರ್ಥವೆ. ಮಿಥ್ಯಾವಸ್ತು ಸತ್ಯವಸ್ತುವಾಗುವುದಿಲ್ಲ. ಜಡವು ಚೇತನಸ್ವರೂಪವಾದ ಬ್ರಹ್ಮವಾಗುವುದೂ ಇಲ್ಲ. ಕಬ್ಬಿಣವನ್ನು ಚಿನ್ನ ಎಂದು ಕರೆದ ಮಾತ್ರದಿಂದ ಚಿನ್ನವಾಗುತ್ತದೆಯೇ?

ಹಾಗಲ್ಲ; ಮನುಷ್ಯನು ಅವಿದ್ಯೆಯಿಂದ ತಾನೊಬ್ಬ ಪರಾಧೀನನಾದ ಜೀವನೆಂದು ತಿಳಿದುಕೊಂಡಿದ್ದಾನೆ. ತಾನು ಬ್ರಹ್ಮವೇ ಆದರೂ ಸತ್ಯ ಸ್ಥಿತಿಯನ್ನು ಅರಿಯಲು ಅವಿದ್ಯೆ ಅಡ್ಡ ಬಂದಿದೆ. ತತ್ತ್ವಮಸಿ–ಇತ್ಯಾದಿ ಶ್ರುತಿವಾಕ್ಯಗಳಿಂದ ಗುರುವು ಉಪದೇಶಮಾಡಿದಾಗ ಮನುಷ್ಯನ ಅವಿದ್ಯೆಯು ನಿವೃತ್ತವಾಗುತ್ತದೆ. ಆಗ ತಾನು ಬ್ರಹ್ಮವೆಂದು ಅರಿತುಕೊಂಡು ಕೃತಾರ್ಥನಾಗುತ್ತಾನೆ. ಆತನು ಸ್ವತಃ ಬ್ರಹ್ಮವೇ ಆಗಿದ್ದರೂ ಅವಿದ್ಯಾನಿವೃತ್ತಿಯೇ ಉಪದೇಶದ ಫಲವೆಂದು ತಿಳಿಯಬೇಕು.

ಇಷ್ಟಾದರೂ ಹಟ ಹಿಡಿದ ದ್ವೈತಿಯು ಇನ್ನೊಂದು ಪ್ರಶ್ನೆಯನ್ನು ಕೇಳುತ್ತಾನೆ. ಅವಿದ್ಯಾನಿವೃತ್ತಿಯು ಉಪದೇಶದ ಫಲವೆಂದು ಹೇಳಿದಿರಲ್ಲವೆ? ಈ ಅವಿದ್ಯಾ ನಿವೃತ್ತಿಯು ಬ್ರಹ್ಮವೇ ಆಗಿದೆಯೋ? ಅಥವಾ ಬ್ರಹ್ಮಕ್ಕಿಂತ ಬೇರೆಯಾಗಿದೆಯೋ? ಬ್ರಹ್ಮವೇ ಆಗಿದ್ದರೆ ಜೀವನು ಅವಿದ್ಯಾನಿವೃತ್ತಿಯುಳ್ಳ ಬ್ರಹ್ಮವೇ ಆಗಿರುವುದರಿಂದ 'ನೀನು ಬ್ರಹ್ಮ' ಎಂದು ಉಪದೇಶಿಸುವುದು ವ್ಯರ್ಥವೇ. ಬ್ರಹ್ಮಭಿನ್ನವಾದರೆ ಅದ್ವೈತಕ್ಕೆ ಭಂಗ ಬರುತ್ತದೆ. ಇದಕ್ಕೆ ನಿಮ್ಮ ಉತ್ತರವೇನು?

ಸಿದ್ಧಾಂತಿಯ ಉತ್ತರ ಹೀಗೆ–ಬ್ರಹ್ಮವು ಶುದ್ಧ ಚೈತನ್ಯಸ್ವರೂಪವಾದದ್ದು. ಅದರಲ್ಲಿ ಅವಿದ್ಯಾನಿವೃತ್ತಿ ಇದೆ ಎಂದರೆ ಅವಿದ್ಯೆ ಇಲ್ಲ. ಜೀವನಿಗೆ 'ತತ್ತ್ವಮಸಿ' ಎಂಬ ಉಪದೇಶದಿಂದ ಮುಖ್ಯವಾದ ಫಲವಿದೆ. 'ನಾನು ಸಂಸಾರದ ಬಂಧನದಲ್ಲಿದ್ದೇನೆ. ನಾನು ದುಃಖಿ' ಎಂಬ ಭ್ರಮೆಯು ಹೋಗಿ ಅವನು 'ಶುದ್ಧ ಬ್ರಹ್ಮವೇ ನಾನು' ಎಂಬ ನಿಶ್ಚಯವನ್ನು ಪಡೆಯುತ್ತಾನೆ. ಆಗ ಸಂಸಾರ ಬಂಧನವೂ ಇರುವುದಿಲ್ಲ. ದುಃಖವೂ ಇರುವುದಿಲ್ಲ. ಆದ್ದರಿಂದ ಆತನಿಗೆ ಗುರೂಪದೇಶವು ವ್ಯರ್ಥವಲ್ಲ. "ನಹಿ ದೃಷ್ಟೇ ಅನುಪಪನ್ನಂ ನಾಮ" ಎಂಬ ನ್ಯಾಯ ಉಂಟು. ಪ್ರತ್ಯಕ್ಷವಾಗಿ ಒಂದು ವಸ್ತು ಕಾಣಿಸುತ್ತಿರುವಾಗ ಯುಕ್ತಿಯಿಂದ ಅದು ಉಪಪನ್ನವಲ್ಲ ಎಂದು ವಾದಿಸುವುದು ಯುಕ್ತವಲ್ಲ. ಹೇಗೆಂದರೆ – ಒಂದು ಊರಿಂದ ಹತ್ತು ಜನರು ವಾಹನಗಳಲ್ಲಿ ದೂರದ ಮದುವೆಗೆ

ಹೋಗಿದ್ದರು. ಅವರಲ್ಲಿ ದೇವದತ್ತ ಎಂಬ ಒಬ್ಬ ಕುಂಟನಿದ್ದನು. ಸಂಜೆ ಊರಿಗೆ ವಾಪಸ್ಸು ಬರುವಾಗ ಅಚಾತುರ್ಯದಿಂದ ಆ ಕುಂಟನು ಮದುವೆ ಮನೆಯಲ್ಲಿಯೇ ಉಳಿದು ಹೋದನು. ಮಾರನೇ ದಿನ ಬೆಳಿಗ್ಗೆ ನೋಡುವಾಗ ದೇವದತ್ತನು ಮನೆಯಲ್ಲಿದ್ದನು. ಒಬ್ಬನು ಆ ವಿಷಯವನ್ನು ಹಿಂದಿನ ದಿನದಲ್ಲಿ ಜೊತೆಗೆ ಬಂದಿದ್ದ ಸ್ನೇಹಿತನಿಗೆ ಹೇಳಿದನು. ಅವನು ತಾರ್ಕಿಕ. ದೇವದತ್ತನು ಬಂದದ್ದನ್ನು ಅವನು ನಂಬಲಿಲ್ಲ. "ದೇವದತ್ತನು ಕುಂಟ. ರಾತ್ರಿಯಲ್ಲಿ ಅವನಿಂದ ನಡೆದು ಮನೆಗೆ ಬರಲು ಸಾಧ್ಯವಿಲ್ಲ. ಅವನನ್ನು ಕರೆತರಲು ಇಲ್ಲಿಂದ ಯಾರೂ ಹೋಗಲಿಲ್ಲ. ಆದ್ದರಿಂದ ಅವನು ಅಲ್ಲಿಯೇ ಇದ್ದಾನೆ. ಮನೆಗೆ ಬರಲಿಲ್ಲ". ಎಂದು ವಾದಿಸಿದನಂತೆ. ಆಗ ಸ್ನೇಹಿತನು ಆ ತಾರ್ಕಿಕನನ್ನು ಕರೆದುಕೊಂಡು ಹೋಗಿ ದೇವದತ್ತನನ್ನು ತೋರಿಸಿದ. ದೇವದತ್ತನು ಸುಖವಾಗಿ ಮನೆಯಲ್ಲಿ ಕುಳಿತಿದ್ದ. ಆ ಊರಿಗೆ ಬರತಕ್ಕ ಇನ್ನೊಬ್ಬರಿದ್ದರು. ಅವರು ಬರುವಾಗ ಆ ಕುಂಟನನ್ನು ತಮ್ಮ ವಾಹನದಲ್ಲಿ ಕರೆತಂದು ಅವನ ಮನೆಗೆ ಸೇರಿಸಿದ್ದರು. ಪ್ರತ್ಯಕ್ಷ ಅನುಭವವು ತರ್ಕಕ್ಕಿಂತ ಪ್ರಬಲವಾದದ್ದು. "ನ ಹಿ ದೃಷ್ಟೇ ಅನುಪಪನ್ನಂ ನಾಮ" ಈ ಅಭಿಪ್ರಾಯದಿಂದ ಮುಂದಿನ ಶ್ಲೋಕವು ಹೊರಟಿದೆ.

**ನ ಶಾಸ್ತಾ ನ ಶಾಸ್ತ್ರಂ ನ ಶಿಷ್ಯೋ ನ ಶಿಕ್ಷಾ**
**ನ ಚ ತ್ವಂ ನ ಚಾಹಂ ನ ಚಾಯಂ ಪ್ರಪಂಚಃ ।**
**ಸ್ವರೂಪಾವಬೋಧೋ ವಿಕಲ್ಪಾಸಹಿಷ್ಣುಃ**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೭ ॥**

ಅವಿದ್ಯಾನಿವೃತ್ತಿಯು ಆತ್ಮನಿಗೆ ಭಿನ್ನವಾಗಿಲ್ಲ. ಅದು ಮೊದಲೇ ಆತ್ಮನಲ್ಲಿರುತ್ತದೆ. ಗುರುವಿನ ಉಪದೇಶದಿಂದ ಅದು ಅಭಿವ್ಯಕ್ತವಾಗುತ್ತದೆ. ಆಗ ಜೀವಾತ್ಮನಿಗೆ ತನ್ನ ನಿಜಸ್ವರೂಪದ ಬೋಧವಾಗುತ್ತದೆ. ಆಗ ಯಾವ ದ್ವೈತದ ವಿಕಲ್ಪಗಳೂ ಇರುವುದಿಲ್ಲ. ಆದ್ದರಿಂದ "ನಾನು ಜ್ಞಾನಸ್ವರೂಪವಾದ ಪರಬ್ರಹ್ಮವಾಗಿದ್ದೇನೆ. ನನ್ನಲ್ಲಿ ಯಾವ ದ್ವೈತದ ವಿಕಲ್ಪವೂ ಇಲ್ಲ. ಶಾಸ್ತೃ- ಎಂದರೆ ಉಪದೇಶಮಾಡುವ ಗುರುವೂ ಇಲ್ಲ. ವೇದಶಾಸ್ತ್ರವೂ ಇಲ್ಲ. ಶಿಷ್ಯನೂ ಇಲ್ಲ. ಉಪದೇಶಕ್ರಿಯೆಯೂ ಇಲ್ಲ. ಕೇಳತಕ್ಕ ನೀನೂ ಇಲ್ಲ. ಹೇಳತಕ್ಕ ನಾನೂ ಇಲ್ಲ! ಎದುರಿಗಿರುವ ಪ್ರಪಂಚವೇ ಸುಳ್ಳು. ವಾಸ್ತವವಾಗಿ ಅದೂ ಇಲ್ಲ. ನಾನು ಕೇವಲ ಶಿವನಾಗಿದ್ದೇನೆ".

ಈ ಸಿದ್ಧಾಂತವನ್ನೇ ಶ್ರೀ ಗೌಡಪಾದಕಾರಿಕೆಯು ಹೀಗೆ ನಿರೂಪಿಸಿದೆ (ಗೌ.ಕಾ.೨–೩೩)

**ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ।**
**ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ॥**

ಸಾವೂ ಇಲ್ಲ, ಜನನವೂ ಇಲ್ಲ, ಸಂಸಾರದಿಂದ ಬದ್ಧನಾದ ಜೀವನೂ ಇಲ್ಲ. ಬಿಡುಗಡೆಗಾಗಿ ಯತ್ನಿಸುವ ಸಾಧಕನೂ ಇಲ್ಲ. ಮೋಕ್ಷವನ್ನು ಬಯಸತಕ್ಕವನೂ ಇಲ್ಲ. ಮುಕ್ತನೂ ಇಲ್ಲ. ಇದೇ ಪರಮಾರ್ಥವಾದ ಸತ್ಯವಾಗಿದೆ.

ದ್ವೈತವೆಲ್ಲವೂ ಮಿಥ್ಯೆಯೆಂದು ಸಿದ್ಧವಾದಾಗ ಸಮಸ್ತ ಲೌಕಿಕ ವೈದಿಕ ವ್ಯವಹಾರಗಳು ನಿಂತು ಹೋಗುತ್ತವೆ.

ಇನ್ನು ಉಪದೇಶಕ್ಕೆ ಮೊದಲು ಆತ್ಮನಲ್ಲಿ ಅವಿದ್ಯೆ ಎಂಬುದೊಂದು ಇರುವುದಷ್ಟೇ. ಆಗ ಅದ್ವೈತವು ಹೇಗೆ ಸಿದ್ಧಿಸುತ್ತದೆ? ಎಂಬ ಪ್ರಶ್ನೆಯುಂಟು. ಅದಕ್ಕೆ ಉತ್ತರ ಹೀಗೆ– ಆತ್ಮಜ್ಞಾನವಾದ ಮೇಲೆ ನಾಶವಾಗುವುದರಿಂದ ಅವಿದ್ಯೆ ಸತ್ ಅಲ್ಲ. ಅದು ದ್ವೈತ ಭ್ರಮೆಯನ್ನು ಉಂಟು ಮಾಡುವುದರಿಂದ ಅಸತ್ ಕೂಡ ಅಲ್ಲ, ಪರಸ್ಪರ ವಿರುದ್ಧವಾದ್ದರಿಂದ ಸದಸತ್ ಕೂಡ ಅಲ್ಲ, ಆದ್ದರಿಂದ ಅವಿದ್ಯೆಯು ಅನಿರ್ವಚನೀಯವಾಗಿದೆ. ಅದು ಮಿಥ್ಯೆ. ಲೋಕದಲ್ಲಿ ಇದನ್ನೇ ಭ್ರಾಂತಿ ಎನ್ನುತ್ತಾರೆ. ಹಗ್ಗವನ್ನು ಹಾವು ಎಂದು ಭ್ರಮಿಸಿದಾಗ ಭ್ರಮೆ ಅನಿರ್ವಚನೀಯ. ಮೊದಲು ಇರುತ್ತದೆ. ಹತ್ತಿರ ಹೋಗಿ ಹಗ್ಗವೆಂದು ತಿಳಿದಾಗ ಇರುವುದಿಲ್ಲ. ಹಾಗೆಯೇ ಹಗ್ಗದಲ್ಲಿ ಕಂಡ ಹಾವೂ ಅನಿರ್ವಚನೀಯ. ಮೊದಲು ಹಾವು ಆಗಿ ಹೆದರಿಸುತ್ತದೆ. ಹತ್ತಿರ ಹೋದಾಗ ಹಗ್ಗವಾಗಿ ಬಿಡುತ್ತದೆ. ಹೀಗೆ ಅನಿರ್ವಚನೀಯವಾದದ್ದು ಸಿದ್ಧಾಂತದಲ್ಲಿ ಮಿಥ್ಯೆಯಾಗುತ್ತದೆ.

ಆತ್ಮನು ಸ್ವಯಂಪ್ರಕಾಶನಾದ ಸ್ವರೂಪನೆಂದು ಹೇಳುವುದಾದರೆ, ಆತನು ಸರ್ವದಾ ಆ ಸ್ವರೂಪದಲ್ಲಿಯೇ ಇರಬೇಕಾಗುತ್ತದೆ. ಆಗ ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ವ್ಯವಸ್ಥೆ ಹೇಗೆ ಸಂಭವಿಸುತ್ತದೆ? ಅವಿದ್ಯೆಯಿಂದಾದ ಭ್ರಾಂತಿಯಿಂದ ವ್ಯವಸ್ಥೆ ಎನ್ನುವುದಾದರೆ ಮೊದಲನೆಯದಾಗಿ ಅದ್ವೈತಕ್ಕೆ ಭಂಗ. ಎರಡನೆಯದಾಗಿ ಸ್ವಪ್ನವೆಂಬ ಒಂದೇ ಅವಸ್ಥೆ ಇರಬೇಕು. ಮೂರು ಅವಸ್ಥೆಗಳಿರಲು ಹೇಗೆ ಸಾಧ್ಯ? ಎಂಬ ಪ್ರಶ್ನೆ ಹುಟ್ಟುತ್ತದೆ. ಇದಕ್ಕೆ

ಸಮಾಧಾನವೆಂದರೆ, ಅವಿದ್ಯೆಯು ಸತ್ ಅಲ್ಲ; ಅಸತ್ ಅಲ್ಲ. ಅದು ಅನಿರ್ವಚನೀಯ ಎಂದು ಹೇಳಿದ್ದೇವೆ. ಸತ್ ಅಲ್ಲವಾದ್ದರಿಂದ ಚೈತನ್ಯವು ಅದ್ವೈತವೆಂಬುದಕ್ಕೆ ಬಾಧೆ ಇಲ್ಲ. ಅಸತ್ ಅಲ್ಲವಾದ್ದರಿಂದ ಅವಿದ್ಯೆಯ ಪ್ರಭಾವ ಉಂಟು. ಭ್ರಾಂತಿಯ ಕಾರ್ಯವು ವಿಚಿತ್ರವಾಗಿರುವುದರಿಂದ ವ್ಯವಹಾರಾನುರೋಧವಾಗಿ ಮೂರು ಅವಸ್ಥೆಗಳನ್ನು ಕಲ್ಪಿಸಲಾಗಿದೆ. ಪರಮಾರ್ಥದಲ್ಲಾದರೋ ಅವಸ್ಥಾತ್ರಯವೂ ಆತ್ಮನಿಗೆ ಇಲ್ಲ. ಇದನ್ನೇ ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

**ನ ಜಾಗ್ರನ್ನ ಮೇ ಸ್ವಪ್ನಕೋ ವಾ ಸುಷುಪ್ತಿಃ**
**ನ ವಿಶ್ವೋ ನ ವಾ ತೈಜಸಃ ಪ್ರಾಜ್ಞಕೋ ವಾ ।**
**ಅವಿದ್ಯಾತ್ಮಕತ್ವಾತ್ ತ್ರಯಾಣಾಂ ತುರೀಯಃ**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೮ ॥**

"ನನಗೆ ಜಾಗ್ರದವಸ್ಥೆ ಇಲ್ಲ, ಸ್ವಪ್ನವಿಲ್ಲ, ಸುಷುಪ್ತಿಯೂ ಇಲ್ಲ. ಆ ಮೂರು ಅವಸ್ಥೆಗಳೂ ಅವಿದ್ಯಾಸ್ವರೂಪಗಳು. ಆದ್ದರಿಂದ ನಾನು ಅವಸ್ಥಾತ್ರಯವೂ ಇಲ್ಲದಿರುವ ತುರೀಯನೂ ಕೇವಲ ಸ್ವಯಂಪ್ರಕಾಶಚೈತನ್ಯಸ್ವರೂಪನಾದ ಶಿವನೂ ಆಗಿದ್ದೇನೆ".

ನನಗೆ ಜಾಗ್ರದವಸ್ಥೆ ಇದೆಯೆಂದು ಅಭಿಮಾನವನ್ನು ತಳೆದ ಜೀವನಿಗೆ ವಿಶ್ವನೆಂದೂ, ಸ್ವಪ್ನಾಭಿಮಾನಿಯಾದ ಜೀವನಿಗೆ ತೈಜಸನೆಂದೂ ಸುಷುಪ್ತಿ ನನಗೆ ಇದೆಯೆಂದು ಅಭಿಮಾನಿಯಾದ ಜೀವನಿಗೆ ಪ್ರಾಜ್ಞನೆಂದೂ ಸಂಜ್ಞೆಗಳು. ಲಯಕ್ರಮದಿಂದ ಈ ಹೆಸರುಗಳು ವ್ಯವಹಾರದಲ್ಲಿ ಬಂದಿವೆ. ಹೇಗೆಂದರೆ, ಜಾಗ್ರತ್ತಿಗೆ ಸ್ವಪ್ನದಲ್ಲಿಯೂ ಸ್ವಪ್ನಕ್ಕೆ ಸುಷುಪ್ತಿಯಲ್ಲಿಯೂ ಲಯ. ಏಕೆಂದರೆ, ಜಾಗ್ರತ್ತಿನಲ್ಲಿ ಮನಸ್ಸು ಮತ್ತು ಇಂದ್ರಿಯಗಳಿಂದ ಪದಾರ್ಥಜ್ಞಾನವಾಗುತ್ತದೆ. ಸ್ವಪ್ನದಲ್ಲಿ ಇಂದ್ರಿಯಗಳು ಲಯ ಹೊಂದಿ ಮನಸ್ಸು ಮಾತ್ರ ವಸ್ತುಗಳನ್ನು ಗ್ರಹಿಸುತ್ತದೆ. ಸುಷುಪ್ತಿಯಲ್ಲಿ ಮನಸ್ಸೂ ಸಹ ಲೀನವಾಗಿ ಬಿಡುತ್ತದೆ, ಆಗ ಜೀವನು ಮಾತ್ರ ಉಳಿದುಕೊಳ್ಳುತ್ತಾನೆ. ಹೀಗೆಯೇ ವಿಶ್ವನು ತೈಜಸನಲ್ಲಿಯೂ ತೈಜಸನು ಪ್ರಾಜ್ಞನಲ್ಲಿಯೂ ಕ್ರಮೇಣ ಲಯಿಸುತ್ತಾರೆ ಎಂದರೆ ಜೀವನು ತನ್ನ ದರ್ಶನ ಶಕ್ತಿಯನ್ನು ಕ್ರಮವಾಗಿ ಲಯಗೊಳಿಸಿ ಸ್ವಸ್ಥನಾಗಿ ಬಿಡುತ್ತಾನೆ.

ಇಲ್ಲಿ ಹೇಳಬೇಕಾದ ಕೆಲವು ವಿಷಯಗಳುಂಟು. ಅದ್ವೈತ ವೇದಾಂತ

ದರ್ಶನದಲ್ಲಿ ದೃಕ್, ದೃಶ್ಯ ಎಂದು ಪದಾರ್ಥವು ಎರಡು ವಿಧ. ದೃಕ್ ಎಂದರೆ ಜ್ಞಾನಸ್ವರೂಪನಾದ ಚೇತನ. ಉಳಿದ ಸಮಸ್ತ ವಸ್ತುಗಳೂ ದೃಶ್ಯದಲ್ಲಿ ಸೇರಿ ಹೋಗುತ್ತವೆ.

ದೃಕ್ ಆದವನೇ ಆತ್ಮ. ಪರಮಾರ್ಥವಾಗಿ ಈತನು ಒಬ್ಬನೇ. ಆದರೆ ಉಪಾಧಿಭೇದದಿಂದ ಆತ್ಮನು ಈಶ್ವರ, ಜೀವ, ಸಾಕ್ಷಿ ಎಂದು ಮೂರು ವಿಧವಾಗುತ್ತಾನೆ. ತನಗೆ ಅಧೀನವಾದ ಮಾಯೆಯಿಂದ ಕೂಡಿದ ಆತ್ಮನು ಈಶ್ವರ. ಮಾಯೆಗೆ ಆಧೀನನಾಗಿ ಮಾಯಾವಿಶಿಷ್ಟನಾದ ಆತ್ಮನು ಜೀವ. ಅಂತಃಕರಣವು ಮಾಯಾ ಕಲ್ಪಿತವಾದದ್ದು ಅಂತಃಕರಣಾವಚ್ಛಿನ್ನ ಚೈತನ್ಯವೇ ಜೀವನೆಂದು ಶಾಸ್ತ್ರಕಾರರು ಹೇಳಿದ್ದಾರೆ. ಆತ್ಮನೇ ಚೈತನ್ಯನಾದ್ದರಿಂದ ಆ ಲಕ್ಷಣವು ಸರಿಯಾಗಿದೆ. ಜೀವನಿಗೆ ಸಂಬಂಧಿಸಿದ ಮಾಯೆಯನ್ನು ಅವಿದ್ಯೆ ಎಂದು ವ್ಯವಹರಿಸುತ್ತಾರೆ. ಅವಿದ್ಯೆಯೇ ಅಜ್ಞಾನ. ಜೀವನ ಅಂತಃಕರಣದಲ್ಲಿ ಪ್ರತಿಬಿಂಬಿಸುವ ಚೈತನ್ಯವು ಸಾಕ್ಷಿ. ಈಶ್ವರನೇ ಸಾಕ್ಷಿಯೆಂದು ಶ್ರೀ ಸುರೇಶ್ವರಾಚಾರ್ಯರು ಹೇಳಿದ್ದಾರೆ. ಅವರ ಪ್ರಕಾರ ಈಶ್ವರ, ಜೀವ ಎಂದು ಉಪಾಧಿನಿಮಿತ್ತದಿಂದ ಆತ್ಮಚೈತನ್ಯವು ಎರಡು ವಿಧವಾಗುತ್ತದೆ. ಹೀಗೆ ಮತಭೇದಗಳು ಹಲವಾರು ಇವೆ. ಮೇಲೆ ಹೇಳಿದವು ಮಾತ್ರ ವೇದಾಂತ ವಿಚಾರಕ್ಕೆ ಸಾಕಾಗುತ್ತದೆ.

ಮಾಯೆಯೆಂದರೆ ಗುಣತ್ರಯವಿಶಿಷ್ಟವಾದ ಪ್ರಕೃತಿ. ಅಧಿಕವಾದ ಸತ್ತ್ವಗುಣವುಳ್ಳ ಮಾಯೆಯಿಂದ ಕೂಡಿದ ಈಶ್ವರನಿಗೆ ವಿಷ್ಣುವೆಂದು ಹೆಸರು. ಇವನೂ ಜಗತ್ತಿನ ಪಾಲನೆಯನ್ನು ಮಾಡತಕ್ಕವನು. ರಜೋಗುಣಪ್ರಧಾನನಾದ ಈಶ್ವರನು ಬ್ರಹ್ಮ. ಇವನು ಸೃಷ್ಟಿಕರ್ತ. ತಮೋಗುಣ ಪ್ರಧಾನನಾದ ಈಶ್ವರನು ರುದ್ರ. ಇವನು ಸಂಹಾರಕರ್ತ. ಹೀಗೆ ಒಬ್ಬ ಈಶ್ವರನೇ ಮೂರು ಕಾರ್ಯಗಳನ್ನು ನಡೆಸುವುದರಿಂದ ತ್ರಿವಿಧನಾಗುತ್ತಾನೆ. ಭಕ್ತರು ಉಪಾಸನೆಗಾಗಿ ಬೇರೆ ಬೇರೆ ರೂಪಗಳನ್ನು ಈತನಿಗೆ ಕಲ್ಪಿಸಿಕೊಂಡಿದ್ದಾರೆ. ಒಬ್ಬ ಈಶ್ವರನೇ ಸೃಷ್ಟಿ ಸ್ಥಿತಿ ಲಯಗಳನ್ನು ನಡೆಸುವಾಗ ಆಯಾ ಗುಣಭೇದಗಳನ್ನು ಧರಿಸಿ ನಾಮಭೇದಗಳನ್ನು ಪಡೆಯುತ್ತಾನೆಂದು ತಾತ್ಪರ್ಯ. ಸೃಷ್ಟಿಕರ್ತನಾದ ಈಶ್ವರನು ಬ್ರಹ್ಮ ಎಂಬಲ್ಲಿ ಬ್ರಹ್ಮಶಬ್ದವು ಪುಲ್ಲಿಂಗದಲ್ಲಿರುತ್ತದೆ. ಯಾವ ಗುಣವೂ ಇಲ್ಲದೆ ನಿರುಪಾಧಿಕನಾದ ಪರಬ್ರಹ್ಮ ಎಂಬ ಅರ್ಥದಲ್ಲಿ ಬ್ರಹ್ಮಶಬ್ದವು ನಪುಂಸಕ ಲಿಂಗದಲ್ಲಿರುತ್ತದೆ ಎಂಬುದನ್ನು ನೆನಪಿನಲ್ಲಿಡಬೇಕು. **ಅಹಂ ಬ್ರಹ್ಮಾಸ್ಮಿ, ಸರ್ವಂ ಖಲ್ವಿದಂ ಬ್ರಹ್ಮ**

ಮುಂತಾದ ವಾಕ್ಯಗಳಲ್ಲಿ ಬ್ರಹ್ಮಶಬ್ದವು ನಪುಂಸಕಲಿಂಗದಲ್ಲಿದ್ದು ಪರಬ್ರಹ್ಮವನ್ನು ಬೋಧಿಸುತ್ತದೆ. ಈ ವ್ಯತ್ಯಾಸವನ್ನು ಅಭ್ಯಾಸಿಗಳು ಮುಖ್ಯವಾಗಿ ಗಮನದಲ್ಲಿಟ್ಟಿರಬೇಕು.

ಸೂಕ್ಷ್ಮಭೂತಗಳನ್ನು ಸೃಷ್ಟಿಸತಕ್ಕವನು ಹಿರಣ್ಯಗರ್ಭನೆಂದೂ ಸ್ಥೂಲಭೂತಗಳನ್ನು ಸೃಷ್ಟಿಸತಕ್ಕವನು ಬ್ರಹ್ಮನೆಂದೂ ಕೆಲವರ ಹೇಳಿಕೆ ಇದೆ. ಹಿರಣ್ಯಗರ್ಭನೇ ಬ್ರಹ್ಮನೆಂದೂ ಅವರಲ್ಲಿ ಭೇದವೇನೂ ಇಲ್ಲವೆಂದು ಇತರರ ಅಭಿಪ್ರಾಯವಿದೆ.

ಈ ತ್ರಿಮೂರ್ತಿಗಳು ಪುರುಷಾಕಾರದವರಾದರೆ ಸರಸ್ವತೀ, ಲಕ್ಷ್ಮೀ, ಪಾರ್ವತೀ ಎಂಬುವರು ಸ್ತ್ರೀಯರ ಆಕಾರದವರು. ಈ ತ್ರಿಮೂರ್ತಿಗಳ ಶಕ್ತಿಗಳು. ಮತ್ಸ್ಯ ಕೂರ್ಮಾದಿಗಳು ಈಶ್ವರನ ಲೀಲಾವತಾರಗಳು. ಒಬ್ಬ ಈಶ್ವರನ ಲೀಲಾ ವಿಭೂತಿಗಳು.

**ಚಿನ್ಮಯಸ್ಯಾದ್ವಿತೀಯಸ್ಯ ನಿಷ್ಕಲಸ್ಯಾಶರೀರೀಣಃ**
**ಉಪಾಸಕಾನಾಂ ಕಾರ್ಯಾರ್ಥಂ ಬ್ರಹ್ಮಣೋ ರೂಪಕಲ್ಪನಾ ॥**

ಎಂಬುದೇ ನಿಶ್ಚಿತವಾದದ್ದು. ಈ ಶ್ಲೋಕದ ತಾತ್ಪರ್ಯ – ಪರಬ್ರಹ್ಮವು ಕೇವಲ ಜ್ಞಾನಸ್ವರೂಪವಾದದ್ದು. ಅದ್ವಿತೀಯವಾದದ್ದು. ಅವಯವರಹಿತವಾದದ್ದು. ಶರೀರರಹಿತವಾದದ್ದು. ಇಂತಹ ಪರಬ್ರಹ್ಮಕ್ಕೆ ಉಪಾಸಕರಾದ ಭಕ್ತರ ನಾನಾ ಅಭೀಷ್ಟಗಳ ಸಿದ್ಧಿಗಾಗಿ ವಿವಿಧ ರೂಪಗಳನ್ನು ಕಲ್ಪಿಸಿಕೊಳ್ಳಲಾಗಿದೆ.

ಜೀವನೂ ಸಹ ವಿಶ್ವ, ತೈಜಸ, ಪ್ರಾಜ್ಞ ಎಂದು ಮೂರು ವಿಧ. ಅವಿದ್ಯೆ, ಅದರ ಪರಿಣಾಮಗಳಾದ ಅಂತಃಕರಣ ಮತ್ತು ಸ್ಥೂಲಶರೀರ ಈ ಮೂರು ಉಪಾಧಿಗಳಿಂದ ಕೂಡಿ ಜಾಗ್ರದವಸ್ಥೆಗೆ ಅಭಿಮಾನಿಯಾದ (ನಾನು ಜಾಗ್ರತ್ತಿನಲ್ಲಿದ್ದೇನೆ ಎಂದು ತಿಳಿದಿರುವ) ಜೀವನು ವಿಶ್ವ ಎನ್ನಿಸುತ್ತಾನೆ. ಸ್ವಪ್ನದಲ್ಲಿ ಸ್ಥೂಲಶರೀರದ ಅಭಿಮಾನವಿರುವುದಿಲ್ಲ. ಉಳಿದ ಅವಿದ್ಯೆ ಮತ್ತು ಅಂತಃಕರಣ – ಈ ಎರಡು ಉಪಾಧಿಗಳಿಂದ ಕೂಡಿದ ವಿಶ್ವನೇ ತೈಜಸ ಎನ್ನಿಸುತ್ತಾನೆ. ಸುಷುಪ್ತಿಯಲ್ಲಿ ಸ್ಥೂಲಶರೀರ, ಅಂತಃಕರಣವೆಂಬ ಎರಡು ಉಪಾಧಿಗಳು ಇರುವುದಿಲ್ಲ. ಜಾಗ್ರತ್ತಿನಲ್ಲಾದ ಸಂಸ್ಕಾರಗಳಿಂದ ಕೂಡಿದ ಅವಿದ್ಯೆಯೊಂದೇ ಉಪಾಧಿಯಾಗಿ ಸುಷುಪ್ತಿಯಲ್ಲಿರುವ ಜೀವನು ಪ್ರಾಜ್ಞಎನ್ನಿಸುತ್ತಾನೆ. ಸತ್ತ್ವಗುಣ

ಮಾತ್ರ ವಿಶಿಷ್ಟವಾದ ಚೈತನ್ಯವೇ ಸಾಕ್ಷಿಯಾದ್ದರಿಂದ ಅದು ಏಕರೂಪದಲ್ಲಿರುತ್ತದೆ. ಅದರಲ್ಲಿ ಯಾವ ವಿಧವೂ ಇಲ್ಲ. ಸತ್ತ್ವಗುಣಾಧಿಕನಾದ ಈಶ್ವರನು ಸಾಕ್ಷಿ ಎಂದು ತಾತ್ಪರ್ಯ, ಇವನು ಜಗತ್ಪಾಲನಾಕಾರ್ಯದಲ್ಲಿ ತೊಡಗಿಲ್ಲವಾದ್ದರಿಂದ ವಿಷ್ಣುವೆನ್ನಿಸುವುದಿಲ್ಲ. ಇದೆಲ್ಲವೂ ಲೋಕವ್ಯವಹಾರ, ಶಾಸ್ತ್ರವಿಚಾರಗಳಿಗಾಗಿ ಮಾಡಿಕೊಂಡಿರುವ ಕಲ್ಪನೆಗಳೆಂದು ತಿಳಿಯಬೇಕು.

ಇನ್ನು ದೃಶ್ಯದ ವಿಚಾರ. ಅವಿದ್ಯೆ ಮತ್ತು ಅವಿದ್ಯಾಜನ್ಯವಾದ ಪಂಚಭೂತಾತ್ಮಕ ಪ್ರಪಂಚ ಇವೆಲ್ಲವೂ ದೃಶ್ಯಕೋಟಿಯಲ್ಲಿ ಸೇರುತ್ತವೆ. ಈ ದೃಶ್ಯವು ಪಾರಮಾರ್ಥಿಕವಾದದ್ದಲ್ಲ. ದೃಶ್ಯವು ಮಿಥ್ಯಾಸ್ವರೂಪವಾದದ್ದು. ಹಾಗಾದರೆ ಇದರ ವಿವರಣೆ ನಮಗೆ ಏಕೆ ಬೇಕು? ಮಿಥ್ಯೆಯಾದ ಕನಸಿನ ವಿವರಣೆಯಂತೆ ಇದೂ ಉಪೇಕ್ಷಣೀಯವಾದ್ದಲ್ಲವೇ? ಹಾಗಲ್ಲ. ಸತ್ತಾ (ಅಸ್ತಿತ್ವ) ಎನ್ನುವುದು ಪಾರಮಾರ್ಥಿಕ, ವ್ಯಾವಹಾರಿಕ, ಪ್ರಾತಿಭಾಸಿಕ ಎಂದು ಮೂರು ವಿಧವಾಗಿದೆ. ಬ್ರಹ್ಮದ ಅಸ್ತಿತ್ವವು ಪಾರಮಾರ್ಥಿಕ ಸತ್ತೆಯಾಗಿದೆ. ಅವಿದ್ಯಾತ್ಮಕವಾದ ಈ ಪ್ರಪಂಚದ ಸತ್ತೆ ವ್ಯಾವಹಾರಿಕ ಸತ್ತೆಯೆನಿಸಿದೆ. ಹಗ್ಗದಲ್ಲಿ ಹಾವನ್ನು ಭ್ರಾಂತಿಯಿಂದ ಕಂಡಂತೆ ವ್ಯವಹಾರದಲ್ಲಿಯೂ ಭ್ರಾಂತಿಯಿಂದ ಕಾಣುವ ವಸ್ತುವಿನ ಸತ್ತೆಗೆ ಪ್ರಾತಿಭಾಸಿಕ ಸತ್ತೆ ಎಂದು ಹೆಸರು. ಪ್ರಾತಿಭಾಸಿಕ ಸತ್ತೆಗೆ ಸ್ವಪ್ನವು ಸೇರುತ್ತದೆ. ಸ್ವಪ್ನದ ವಸ್ತುವಿನಿಂದ ವ್ಯವಹಾರಕ್ಕೆ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ಪ್ರಾತಿಭಾಸಿಕದ ವಿವರಣೆ ಬೇಕಾಗುವುದಿಲ್ಲ. ಪಾರಮಾರ್ಥಿಕವಾದ ಪರಬ್ರಹ್ಮದ ಸತ್ತೆಯಿಂದಲೂ ವ್ಯವಹಾರಕ್ಕೆ ಪ್ರಯೋಜನ ವಿಲ್ಲವಾದರೂ ಬ್ರಹ್ಮಜ್ಞಾನಕ್ಕೆ ಉಪಯುಕ್ತವಾದ ಆತ್ಮೋಪಾಸನೆ, ಗುರುಶಿಷ್ಯಾದಿ ವ್ಯವಸ್ಥೆ, ಭಕ್ತಿ, ಕರ್ಮಾಚರಣೆ ಮೊದಲಾದ್ದಕ್ಕೆ ಲಕ್ಷ್ಯವಾಗಿ ಪಾರಮಾರ್ಥಿಕ ವಸ್ತುವಿನ ಉಪಯೋಗವಿದ್ದೇ ಇದೆ. ಆದ್ದರಿಂದ ಆತ್ಮಸ್ವರೂಪದ ವಿಚಾರವು ಅವಶ್ಯಕ. ಅದಕ್ಕೆ ಉಪಯುಕ್ತವಾದ್ದರಿಂದ ವ್ಯಾವಹಾರಿಕ ಪದಾರ್ಥಗಳ ವಿಶ್ಲೇಷಣೆ ಅವಶ್ಯವೆಂದು ತಿಳಿಯಬೇಕು.

ಈ ದೃಶ್ಯಪ್ರಪಂಚವೂ ಅವ್ಯಾಕೃತ, ಮೂರ್ತ, ಅಮೂರ್ತ ಎಂದು ಮೂರು ವಿಧ. ಅವಿದ್ಯೆ, ಚಿದ್ರೂಪವಾದ ಬ್ರಹ್ಮದೊಡನೆ ಅವಿದ್ಯೆಯ ಸಂಬಂಧ, ಜೀವೇಶ್ವರ ವಿಭಾಗ, ಅವಿದ್ಯಾಗತವಾದ ಚಿದಾಭಾಸ ಈ ನಾಲ್ಕು ಪದಾರ್ಥಗಳು ಅವ್ಯಾಕೃತವೆನಿಸುತ್ತವೆ. ಅವಿದ್ಯೆಯು ಚಿದ್ರೂಪವಾದ ಬ್ರಹ್ಮದ ಒಂದಾನೊಂದು ಶಕ್ತಿ ವಿಶೇಷ. ಅದು ಜಡವಾದರೂ ಕನ್ನಡಿಯಂತೆ ಸ್ವಚ್ಛವಾದದ್ದು. ಅದರಲ್ಲಿ

ಪ್ರತಿಫಲಿಸಿದ ಚಿತ್ತಿನ ಪ್ರತಿಬಿಂಬವನ್ನು ಆಭಾಸ ಎಂದು ಕರೆಯುತ್ತಾರೆ. ಈ ಆಭಾಸವು ಚಿತ್ತಿನ ಪ್ರತಿಬಿಂಬವೇ ಹೊರತು ಚಿತ್ ಅಲ್ಲ. ಜಡವೂ ಅಲ್ಲ. ಉಭಯ ವಿಲಕ್ಷಣವಾದದ್ದು ಈ ಆಭಾಸ. ಈ ಚಿದಾಭಾಸಸಹಿತವಾದ ಅವಿದ್ಯೆಯು ಸಮಸ್ತ ಮೂರ್ತಾಮೂರ್ತಗಳಿಂದ ಕೂಡಿದ ಜಗತ್ತನ್ನು ನಿರ್ಮಿಸಬಲ್ಲ ಈಶ್ವರನ ಶಕ್ತಿಯಾಗಿದೆ. ಹಿಂದೆ ಹೇಳಿದ ಈಶ್ವರ ಶಕ್ತಿಯೇ ಇದು. ಮಣ್ಣು ಗಡಿಗೆಗೆ ಕಾರಣವಾದಂತೆ ಅವಿದ್ಯೆಯೇ ಜೀವ ಜಗತ್ತುಗಳಿಗೆ ಕಾರಣವಾಗಿದೆ. ಗಡಿಗೆಗೆ ಕಾರಣವಾದ ಮಣ್ಣು ನಿವೃತ್ತವಾದೊಡನೆ ಗಡಿಗೆ ಇರುವುದಿಲ್ಲ. ನೂಲನ್ನು ತೆಗೆದು ಹಾಕಿದರೆ ಬಟ್ಟೆ ಇರುವುದಿಲ್ಲ. ಹಾಗೆಯೇ ಅವಿದ್ಯೆಯು ನಿವೃತ್ತವಾದರೆ ಚಿತ್ ಅವಿದ್ಯೆಗಳ ಸಂಬಂಧವಾಗಲಿ, ಚಿದಾಭಾಸವಾಗಲೀ, ಜಗತ್ತಾಗಲಿ ಇರುವುದಿಲ್ಲ! ಮೊದಲಿಗೆ ಚಿತ್ ಅವಿದ್ಯೆಗಳಿಗೆ ಸಂಬಂಧ ಹೇಗೆ ಆಯಿತು? ಎಂಬ ಪ್ರಶ್ನೆಗೆ ಅದು ಅನಾದಿ ಎಂಬುದಷ್ಟೇ ಉತ್ತರ. ಆದ್ದರಿಂದ ಮುಮುಕ್ಷುವಾದವನು ಅವಿದ್ಯೆಯನ್ನು ಮುಖ್ಯವಾಗಿ ಹೋಗಲಾಡಿಸಿಕೊಳ್ಳಬೇಕು. ಅವಿದ್ಯೆಯ ನಿವೃತ್ತಿಯಾಗದೆ ಮೋಕ್ಷವಿಲ್ಲ. ದೈವಭಕ್ತಿ, ಉಪಾಸನೆ, ಕರ್ಮ ಇವು ಅವಿದ್ಯಾ ನಿವೃತ್ತಿಗೆ ಸಹಕಾರಿಗಳು. ಜೀವ ಈಶ್ವರ ಇಬ್ಬರಿಗೂ ಮಾಯಾಶಕ್ತಿಯ ಸಂಬಂಧವಿದ್ದರೂ ಅವರೀರ್ವರೂ ದೃಕ್‌ನಲ್ಲಿ ಸೇರುತ್ತಾರೆ. ಮಾಯೆಯೇ ಅವಿದ್ಯೆ ಎನಿಸುತ್ತದೆ. ಅನಾದಿಯಾದ ಜೀವಕರ್ಮಗಳಿಂದ ಯುಕ್ತವಾದ ಈ ಅವಿದ್ಯೆಗೆ ಈಶ್ವರಚೈತನ್ಯದಿಂದ ಸ್ಫುರಣ ಉಂಟಾಗುತ್ತದೆ. ಆಗ ಈ ಅವಿದ್ಯೆಯು ಜೀವರಿಗೆ ಕರ್ಮಫಲಗಳನ್ನು ಉಂಟುಮಾಡುವುದಕ್ಕಾಗಿ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಸೂಕ್ಷ್ಮ ಭೂತಗಳನ್ನು ಸೃಜಿಸುತ್ತದೆ. ವಸ್ತುತಃ ಈ ಶಬ್ದಾದಿಗಳು ಪಂಚಮಹಾಭೂತಗಳ ಗುಣಗಳು. ವೇದಾಂತಿಗಳು ಗುಣಗುಣಿಗಳಿಗೆ ತಾದಾತ್ಮ್ಯವನ್ನು ಒಪ್ಪಿರುವುದರಿಂದ ಈ ಶಬ್ದಾದಿಗಳು ಆಕಾಶಾದಿ ಮಹಾಭೂತಗಳ ಸೂಕ್ಷ್ಮ ರೂಪಗಳೆಂದು ತಿಳಿಯಬೇಕು. ಆಕಾಶದ ಸೂಕ್ಷ್ಮರೂಪ ಶಬ್ದಗುಣ. ವಾಯು ಮುಂತಾದವಕ್ಕೂ ಹೀಗೆಯೇ ಕ್ರಮವಾಗಿ ಸ್ಪರ್ಶಾದಿಗಳು ಗುಣಗಳು. ಇವೇ ಮಹಾಭೂತಗಳ ಸೂಕ್ಷ್ಮ ಸ್ವರೂಪಗಳೂ ಆಗಿವೆ. ಇವೆಲ್ಲವೂ ಪ್ರಸಿದ್ಧಿಯನ್ನು ಪಡೆದಿವೆ. ಇವು ಸೂಕ್ಷ್ಮದ್ರವ್ಯಗಳೆಂದೂ ಶಬ್ದಾದಿ ಗುಣಗಳ ಹೆಸರುಗಳೇ ಇವಕ್ಕೆ ಇವೆಯೆಂದೂ ಕೆಲವರ ಅಭಿಪ್ರಾಯ.

**ಆತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ। ಅದ್ಭ್ಯಃ ಪೃಥಿವೀ ।** ಎಂದು ಶ್ರುತಿಯಿದೆಯಷ್ಟೇ! ಇದರ ಅರ್ಥವೇನೆಂದರೆ –ಆತ್ಮಚೈತನ್ಯದಿಂದ ಸ್ಫುರಣಗೊಂಡ ಪೂರ್ವೋಕ್ತವಾದ

ಅವಿದ್ಯೆಯಿಂದ ಶಬ್ದಾತ್ಮಕವಾದ ಆಕಾಶ ಹುಟ್ಟುತ್ತದೆ. ಆಕಾಶಾತ್ಮಕವಾದ ಅವಿದ್ಯೆಯು ಸ್ಪರ್ಶಾತ್ಮಕವಾದ ವಾಯುವನ್ನು ಉತ್ಪಾದಿಸುತ್ತದೆ. ವಾಯುಸ್ವರೂಪವನ್ನು ಪಡೆದ ಅವಿದ್ಯೆಯು ರೂಪಾತ್ಮಕವಾದ ಅಗ್ನಿಯನ್ನೂ ಅಗ್ನಿಸ್ವರೂಪದ ಅವಿದ್ಯೆಯು ರಸಾತ್ಮಕವಾದ ಜಲವನ್ನೂ ಜಲಾತ್ಮಕವಾದ ಅವಿದ್ಯೆಯು ಗಂಧಾತ್ಮಕವಾದ ಪೃಥಿವಿಯನ್ನೂ ಉತ್ಪಾದಿಸುತ್ತದೆ ಎಂದರ್ಥ. ಆಕಾಶಕ್ಕೆ ಕಾರಣವಾದ ಶಬ್ದಾತ್ಮಕ ಅವಿದ್ಯೆಯಲ್ಲಿರುವ ಶಬ್ದವು ಅವಿದ್ಯಾಕಾರ್ಯವಾದ ವಾಯುವಿನಲ್ಲಿಯೂ ಅನುವೃತ್ತವಾಗುವುದರಿಂದ ವಾಯುವಿನಲ್ಲಿ ಶಬ್ದ, ಸ್ಪರ್ಶ ಎಂಬ ಎರಡು ಗುಣಗಳು ಕಾಣಿಸುತ್ತವೆ. ಹೀಗೆಯೇ ಅಗ್ನಿಯಲ್ಲಿ ಶಬ್ದ ಸ್ಪರ್ಶ ರೂಪಗಳೂ ಜಲದಲ್ಲಿ ಶಬ್ದ ಸ್ಪರ್ಶ ರೂಪರಸಗಳೂ ಪೃಥಿವಿಯಲ್ಲಿ ಶಬ್ದ ಸ್ಪರ್ಶ ರೂಪರಸಗಂಧಗಳೂ ಕಾಣಿಸುತ್ತವೆಯೆಂದೂ ತಿಳಿಯಬೇಕು. ಅವಿದ್ಯೆಯ ಏಕದೇಶವು ಮಾತ್ರ ಆಕಾಶವಾಗುತ್ತದೆ. ಆಕಾಶದ ಒಂದಂಶವು ಮಾತ್ರ ಅಗ್ನಿಯೂ ಅಗ್ನಿಯ ಒಂದಂಶವು ಜಲವೂ ಜಲದ ಒಂದಂಶವು ಪೃಥಿವಿಯೂ ಆಗುತ್ತವೆಯೇ ಹೊರತು ಸರ್ವವೂ ರೂಪಾಂತರವನ್ನು ಹೊಂದುವುದಿಲ್ಲ. ಆದ್ದರಿಂದ ಅವಿದ್ಯೆಯು ಈ ಪಂಚಭೂತಗಳನ್ನು ವ್ಯಾಪಿಸಿಕೊಂಡಿದೆ. ಆಕಾಶವು ವಾಯವನ್ನು ವ್ಯಾಪಿಸಿಕೊಂಡಿದೆ ಎಂದರೆ ಆಕಾಶಾದಿಗಳೂ ತಮ್ಮಿಂದ ಜನಿಸಿದ ವಾಯು ಮುಂತಾದವುಗಳಿಗೆ ವ್ಯಾಪಕಗಳು. ಜನಿಸಿದ ಕಾರ್ಯವು ಕಾರಣದಿಂದ ವ್ಯಾಪ್ಯವಾಗಿರುತ್ತದೆಯೆಂದೂ ತಾತ್ಪರ್ಯ. ವ್ಯಾಪ್ಯವು ವ್ಯಾಪಕಕ್ಕಿಂತ ಚಿಕ್ಕದು. ಈ ಪಂಚಮಹಾಭೂತಗಳಿಂದ ಜಗತ್ತು ವ್ಯಾಪಿಸಿ ಹೋಗಿದೆ. ಮನುಷ್ಯ, ಮೃಗ, ಹಕ್ಕಿ, ಹುಳು – ಮುಂತಾದವುಗಳ ಶರೀರಗಳೂ ಗಿಡ, ಮರ, ಬಳ್ಳಿ ಮೊದಲಾದವೂ ಈ ಪಂಚಮಹಾಭೂತಗಳ ರೂಪಾಂತರಗಳು. ಅವು ಅತಿರಿಕ್ತವಾದವಲ್ಲ. ಇವೆಲ್ಲವೂ ದೃಶ್ಯಗಳು. ಈ ಜೀವಾತ್ಮರು ಇವುಗಳಲ್ಲಿ ಸೇರುವುದಿಲ್ಲ. ಅವರು ದೃಕ್ ಸ್ವರೂಪರು.

ಹಾಗಾದರೆ ಕತ್ತಲೆ (ತಮಸ್ಸು) ಯಾವುದರಲ್ಲಿ ಸೇರುತ್ತದೆ? ತಾರ್ಕಿಕರೇ ಮೊದಲಾದವರು ಬೆಳಕಿನ ಅಭಾವವೇ ಕತ್ತಲೆ. ಅದು ಭಾವರೂಪವಾದ ಒಂದು ವಸ್ತುವಲ್ಲ ಎನ್ನುತ್ತಾರೆ. ಹಾಗಾದರೆ ರಾತ್ರಿ ದೀಪವನ್ನು ತಂದಾಗ ಕತ್ತಲೆ ಅತ್ತಿತ್ತ ಚಲಿಸುತ್ತದೆಯಲ್ಲ? ಆ ಚಲನಕ್ರಿಯೆ ಯಾವುದರಲ್ಲಿದೆ? ಬೆಳಕು ಹರಡಿದಾಗ ಕತ್ತಲೆ ಚಲಿಸುವಂತೆ ತೋರುತ್ತದೆ. ಅದು ಭ್ರಾಂತಿಯೇ ಸರಿ ಎಂದು ತಾರ್ಕಿಕರು ಹೇಳುತ್ತಾರೆ. ವೇದಾಂತಿಗಳು ಅದನ್ನೊಪ್ಪುವುದಿಲ್ಲ. ಭ್ರಾಂತಿಯಾದರೆ ಅನಂತರ

ಬಾಧಿತವಾಗಬೇಕು. ಬಾಧೆಯೇನೂ ಇಲ್ಲ. ಕಪ್ಪೆಚಿಪ್ಪನ್ನು ಬೆಳ್ಳಿ ಎಂದು ತಿಳಿಯುವುದು ಭ್ರಾಂತಿ. ಏಕೆಂದರೆ ಹತ್ತಿರ ಹೋಗಿ ನೋಡಿದಾಗ ಬೆಳ್ಳಿಯೆಂದು ತಿಳಿದದ್ದು ಬಾಧಿತವಾಗುತ್ತದೆ. ಬಾಧೆ ಇಲ್ಲದ್ದರಿಂದ ಚಲನಕ್ರಿಯೆ ಕತ್ತಲೆಯಲ್ಲಿದೆ. ಆದ್ದರಿಂದ ಕತ್ತಲೆ ಒಂದು ವಸ್ತು. ಅದು ಹುಟ್ಟಿದ ವಿಚಾರವನ್ನು ವೇದವು ಏಕೆ ಹೇಳಿಲ್ಲ? ಪಂಚಭೂತಗಳಂತೆ ಸಂಸಾರ ಹೇತುವಾದ ದೇಹದಲ್ಲಿ ಅದರ ಬಳಕೆಯಿಲ್ಲವಾದ್ದರಿಂದ ಹೇಳಿಲ್ಲ. ಕತ್ತಲೆ ಅವಿದ್ಯೆಯಿಂದ ಹುಟ್ಟಿದೆಯೆಂದು ವೇದಾಂತಿಗಳ ಆಶಯವಿದೆ. ಮೀಮಾಂಸಕರೂ ಹೀಗೆಯೇ ಹೇಳುತ್ತಾರೆ.

ಇನ್ನು ದಿಕ್‌ಕಾಲಗಳ ವಿಷಯವೇನು? ಅವು ಭಾವಪದಾರ್ಥಗಳೆಂದೂ ನಿತ್ಯವಾದವುಗಳೆಂದೂ ವೈಶೇಷಿಕಾದಿ ದರ್ಶನಕಾರರು ಹೇಳಿದ್ದಾರೆ. ಅವೆರಡರ ವಿಷಯವನ್ನು ಶ್ರುತಿಯು ಏಕೆ ಹೇಳಿಲ್ಲ? ಆಕಾಶದ ಉತ್ಪತ್ತಿಯನ್ನು ಶ್ರುತಿಯು ಹೇಳಿದೆಯಷ್ಟೇ? ಆಕಾಶವೇ ವ್ಯವಹಾರದಲ್ಲಿ ದಿಕ್ ಎನಿಸುತ್ತದೆ. ಆಕಾಶಕ್ಕಿಂತ ಬೇರೆಯಾಗಿ ದಿಕ್ ಎಂಬುದಿಲ್ಲ. ಸೂರ್ಯನು ಹುಟ್ಟುವ ಆಕಾಶಪ್ರದೇಶಕ್ಕೆ ಪೂರ್ವ ದಿಕ್ ಎಂದು ಹೆಸರು. ಈ ರೀತಿ ಆಕಾಶವನ್ನೇ ವ್ಯವಹಾರದಲ್ಲಿ ದಿಕ್ಕುಗಳೆಂದು ಕಲ್ಪಿಸಿಕೊಂಡಿದ್ದೇವೆ. **ದಿಶಃ ಶ್ರೋತ್ರಂ** ಎಂದು ಉಪನಿಷತ್ತು ಹೇಳುತ್ತದೆ. ದಿಕ್ಕುಗಳಿಂದ ಶ್ರೋತ್ರೇಂದ್ರಿಯವು ಹುಟ್ಟಿದೆಯೆಂದು ತಿಳಿದು ಬರುವುದರಿಂದ ಶ್ರೋತ್ರೇಂದ್ರಿಯಕ್ಕೆ ಆಕಾಶವೇ ಉಪಾದಾನ ಕಾರಣವೆಂದು ಗೊತ್ತಾಗುತ್ತದೆ. ಕಾಲವೂ ಅವಿದ್ಯೆಯೇ ಸರಿ. ಅದು ಅವ್ಯಾಕೃತವಾಗಿದ್ದು ಈಶ್ವರನಿಗೆ ಉಪಾಧಿಯಾಗಿರುತ್ತದೆ. ಭರ್ತೃಹರಿಯು ವಾಕ್ಯಪದೀಯದಲ್ಲಿ ಕಾಲವು ಬ್ರಹ್ಮ ಶಕ್ತಿಯೆಂದು ಹೇಳಿದ್ದಾನೆ. ಶಕ್ತಿಯು ಅವಿದ್ಯಾಸ್ವರೂಪವೇ ಆಗಿದೆಯೆಂಬುದನ್ನು ಗಮನಿಸಬೇಕು.

ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚಭೂತಗಳು ಪಂಚೀಕರಣ ಹೊಂದಿ ಆಕಾಶಾದಿ ಪಂಚಮಹಾಭೂತಗಳಾಗುವುದಕ್ಕೆ ಮೊದಲು ಅಮೂರ್ತಗಳಾಗಿರುತ್ತವೆ. ಗುಣತ್ರಯಾತ್ಮಕವಾದ ಅವಿದ್ಯೆಯಿಂದ ಹುಟ್ಟಿದ ಇವುಗಳಲ್ಲಿಯೂ ಗುಣತ್ರಯವಿರುತ್ತದೆ. ಈ ಶಬ್ದಾದಿ ಪಂಚಭೂತಗಳು ಒಟ್ಟಾಗಿ ತಮ್ಮಲ್ಲಿರುವ ಸತ್ತ್ವಗುಣಪ್ರಧಾನವಾದ ಗುಣತ್ರಯದಿಂದ ಸ್ವಚ್ಛವಾದ ಅಂತಃಕರಣವನ್ನು ಉತ್ಪಾದಿಸುತ್ತವೆ. ಈ ಅಂತಃಕರಣದಲ್ಲಿ ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆರಡೂ ಇವೆ. ಅಂತಃಕರಣವು ಬುದ್ಧಿ, ಮನಸ್ಸು ಎಂದು ಎರಡು ವಿಧ. ಚಿತ್ತ, ಅಹಂಕಾರಗಳು ಈ ಎರಡರಲ್ಲಿಯೇ ಸೇರುತ್ತವೆ. ಚಿತ್ತವು

ಮನಸ್ಸಿನಲ್ಲಿಯೂ ಅಹಂಕಾರವು ಬುದ್ಧಿಯಲ್ಲಿಯೂ ಸೇರುತ್ತವೆ ಎಂದು ಕೆಲವರ ಅಭಿಪ್ರಾಯವಾಗಿದೆ.

ಅಮೂರ್ತಗಳಾದ ಶಬ್ದಾದಿ ಸೂಕ್ಷ್ಮಭೂತಗಳೆಲ್ಲವೂ ಸೇರಿ ಅಂತಃಕರಣವನ್ನು ಉತ್ಪಾದಿಸಿದಂತೆ ಒಂದೊಂದಾಗಿ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನು ಉತ್ಪಾದಿಸುತ್ತವೆ. ಶಬ್ದಾತ್ಮಕವಾದ ಆಕಾಶದಿಂದ ಶ್ರೋತ್ರೇಂದ್ರಿಯವೂ ವಾಗ್ರೂಪವಾದ ಕರ್ಮೇಂದ್ರಿಯವೂ ಹುಟ್ಟುತ್ತದೆ. ಇದೆಲ್ಲವೂ ಪಂಚೀಕರಣ ಪ್ರಕ್ರಿಯೆಗೆ ಸೇರಿದ್ದು. ಹೀಗೆಯೇ ತ್ರಿವೃತ್ಕರಣವೆಂಬ ಇನ್ನೊಂದು ಸೃಷ್ಟಿಪ್ರಕಾರವೂ ಇದೆ. **ತ್ರಿವೃತಂ ತ್ರಿವೃತಮೇಕೈಕಾಂ ಕರವಾಣಿ** (೬-೩-೩) ಎಂಬ ಛಾಂದೋಗ್ಯ ಶ್ರುತಿಯು ಇದಕ್ಕೆ ಪ್ರಮಾಣವಾಗಿದೆ. ಬ್ರಹ್ಮಸೂತ್ರದಲ್ಲಿಯೂ (೨-೪-೨೦) ಇದರ ಪ್ರಸ್ತಾವ ಬಂದಿದೆ. ಈ ತ್ರಿವೃತ್ಕರಣದಲ್ಲಿ ತೇಜೋಬನ್ನಗಳಿಗೆ (ಅಗ್ನಿ, ಜಲ, ಪೃಥ್ವಿ)ಗಳಿಗೆ ಮಾತ್ರ ಅನ್ಯೋನ್ಯಮೇಲನ ಉಂಟು. ಆಕಾಶ, ವಾಯುಗಳಿಗೆ ಉಳಿದ ಮೂರು ಭೂತಗಳ ಸಂಬಂಧವಿರುವುದಿಲ್ಲ. ತೈತ್ತೀರಿಯದ ಪ್ರಕಾರ ಪಂಚೀಕರಣ, ಛಾಂದೋಗ್ಯದ ಪ್ರಕಾರ ತ್ರಿವೃತ್ಕರಣ, ವಾಚಸ್ಪತಿಮಿಶ್ರರು ತ್ರಿವೃತ್ಕರಣವನ್ನೂ, ಮಧುಸೂದನ ಸರಸ್ವತಿಗಳು ಪಂಚೀಕರಣ ವಿಧಾನವನ್ನೂ ಅಂಗೀಕರಿಸಿದ್ದಾರೆ. ಅವಿದ್ಯಾಮೂಲವಾದ ಈ ಸೃಷ್ಟಿಪ್ರಕ್ರಿಯೆಯು ಅನ್ಯತ್ರ ವಿಸ್ತೃತವಾಗಿ ಬಂದಿರುವುದರಿಂದಲೂ ಅದರಿಂದ ತತ್ತ್ವಜಿಜ್ಞಾಸುವಿಗೆ ಹೆಚ್ಚಿನ ಪ್ರಯೋಜನವಿಲ್ಲವಾದ್ದರಿಂದಲೂ ಇಲ್ಲಿ ಅವೆಲ್ಲವನ್ನೂ ವಿವರಿಸಲು ಪ್ರಯತ್ನಿಸುವುದಿಲ್ಲ.

ಈ ಎಂಟನೆಯ ಶ್ಲೋಕದಲ್ಲಿ ಜಾಗ್ರತ್ ಮುಂತಾದ ಅವಸ್ಥಾತ್ರಯವು ಪ್ರಸ್ತುತವಾಗಿದೆ. ಶ್ರೋತ್ರ ಮುಂತಾದ ಇಂದ್ರಿಯಗಳ ಮೂಲಕ ಮನಸ್ಸು ಬಾಹ್ಯವಸ್ತುಗಳನ್ನು ಗ್ರಹಿಸುವುದಕ್ಕೆ ಜಾಗ್ರತ್ ಎಂದು ಹೆಸರು. ಈ ಜಾಗ್ರದವಸ್ಥೆಯಲ್ಲಿರುವ ಜೀವಾತ್ಮನಿಗೆ ವಿಶ್ವ ಎಂದು ಹೆಸರು. ಜಾಗ್ರತ್ತಿನ ಸುಖದುಃಖ ಭೋಗಗಳು ಸ್ವಲ್ಪ ಕಾಲ ನಿಂತಾಗ ಶ್ರೋತ್ರ ಮುಂತಾದ ಇಂದ್ರಿಯಗಳು ತಮ್ಮ ವ್ಯಾಪಾರಗಳನ್ನು ನಿಲ್ಲಿಸುತ್ತವೆ. ಅಂತರಿಂದ್ರಿಯವಾದ ಮನಸ್ಸು ಮಾತ್ರ ವಿಶ್ರಮಿಸದೆ ಕಾರ್ಯದಲ್ಲಿ ತೊಡಗಿರುವ ಸ್ಥಿತಿಗೆ ಸ್ವಪ್ನವೆಂದು ಹೆಸರು. ಆಗ ಇಂದ್ರಿಯಗಳು ತಮ್ಮ ವ್ಯಾಪಾರವನ್ನು ನಿಲ್ಲಿಸಿದ್ದರೂ ಅಂತಃಕರಣಲ್ಲಿರುವ ಸಂಸ್ಕಾರವಿಶೇಷದಿಂದ ಮನಸ್ಸು ಬೇರೆ ಬೇರೆ ವಸ್ತುವನ್ನು ತಿಳಿದುಕೊಳ್ಳುತ್ತದೆ.

ಅದನ್ನನುಭವಿಸುವ ಜೀವನಿಗೆ ತೈಜಸನೆಂದು ಹೆಸರು. ಜಾಗ್ರತ್, ಸ್ವಪ್ನಗಳೆರಡೂ ಮಾನವನ ಸುಕೃತ ದುಷ್ಕೃತಗಳ ಫಲವಾಗಿ ಬೇರೆ ಬೇರೆ ಸ್ವರೂಪದಿಂದ ಬಂದೊದಗುತ್ತವೆ.

ಇಲ್ಲಿ ತಿಳಿದುಕೊಳ್ಳಬೇಕಾದ ಕೆಲವು ವಿಷಯಗಳುಂಟು. ಜಾಗ್ರತ್ತಿನಲ್ಲಿ ಒಂದು ಗಡಿಗೆಯನ್ನು ನೋಡಿದಾಗ ಗಡಿಗೆಯ ಜ್ಞಾನವಾಗುತ್ತದೆಯಷ್ಟೆ. ಆಗ ಮನಸ್ಸು ಗಡಿಗೆಯಂತಹ ಒಂದು ಆಕಾರವನ್ನು ಧರಿಸುತ್ತದೆ. ಒಂದು ಕಪ್ಪೆಚಿಪ್ಪನ್ನು ನೋಡಿ, ಅದು ಬೆಳ್ಳಿಯೆಂದು ಭ್ರಮಿಸಿದಾಗ ಆ ಭ್ರಮೆಗೆ ಪ್ರಾತಿಭಾಸಿಕ ಜ್ಞಾನವೆಂದು ಹೆಸರು. ಆಗ ಮಾತ್ರ ಬೆಳ್ಳಿಯ ಆಕಾರವನ್ನು ನಮ್ಮ ಮನಸ್ಸು ಗ್ರಹಿಸುತ್ತದೆಯೇ ಹೊರತು ಮನಸ್ಸು ಬೆಳ್ಳಿಯ ಆಕಾರವನ್ನು ಧರಿಸುವುದಿಲ್ಲ ಎಂಬುದು ಸರ್ವಸಂಮತವಾದ ನಿರ್ಣಯವಾಗಿದೆ. ಸ್ವಪ್ನದಲ್ಲಿ ಬಾಹ್ಯವಸ್ತುವಿಲ್ಲದಿದ್ದರೂ ಇದ್ದಂತೆ ತೋರುವುದರಿಂದ ಆ ಜ್ಞಾನವೂ ಭ್ರಮೆಯೇ ಆದ್ದರಿಂದ ಅದೂ ಪ್ರಾತಿಭಾಸಿಕವೇ ಆಗಿದೆ. ಆದರೆ ಸ್ವಪ್ನದ ಆ ಪದಾರ್ಥಗಳು ಹೇಗೆ ನಿಷ್ಪನ್ನವಾದವು? ಎಂಬುದು ಇಲ್ಲಿ ಸಂಭವಿಸುವ ಪ್ರಶ್ನೆ. ಜಾಗ್ರತ್ತಿನಲ್ಲಿ ಬಾಹ್ಯವಸ್ತುವಾದ ಕಪ್ಪೆಚಿಪ್ಪು ಇತ್ತು. ಅದು ಬೆಳ್ಳಿಯಾಗಿ ಅವಿದ್ಯೆಯಿಂದ ತೋರಿತು. ಸ್ವಪ್ನದಲ್ಲಿ ಬಾಹ್ಯ ವಸ್ತುವೇ ಇಲ್ಲದ್ದರಿಂದ ಈ ಪ್ರಶ್ನೆ ಹುಟ್ಟಿದೆ.

ಇಲ್ಲಿ ಎರಡು ಪಕ್ಷಗಳಿವೆ. ಸ್ವಪ್ನದಲ್ಲಿ ಆನೆ ಕಾಣಿಸುತ್ತದೆ. ಅದನ್ನು ಮನಸ್ಸು ಸೃಜಿಸುತ್ತದೆ. ಅವಿದ್ಯೆಯು ಗ್ರಹಿಸುತ್ತದೆ ಎಂದರೆ ಅವಿದ್ಯೆಯು ಆನೆಯನ್ನು ತಿಳಿಯುತ್ತದೆ ಎಂದು ಇನ್ನೊಂದು ಪಕ್ಷ. ಜಾಗ್ರತ್ತಿನಲ್ಲಾಗಲಿ, ಸ್ವಪ್ನದಲ್ಲಾಗಲೀ ಪ್ರಾತಿಭಾಸಿಕ ಜ್ಞಾನವಾಗುವುದು ಅವಿದ್ಯೆಯಿಂದಲೇ ಎಂಬುದನ್ನು ಎರಡು ಪಕ್ಷದವರೂ ಒಪ್ಪುತ್ತಾರೆ. ಜಾಗ್ರತ್ತಿನಲ್ಲಿ ವ್ಯಾವಹಾರಿಕವಾಗಿ ಗಡಿಗೆ, ಆನೆ ಮುಂತಾದವು ಇರುತ್ತವೆ. ಸ್ವಪ್ನದಲ್ಲಿ ಇರುವುದಿಲ್ಲ. ಸ್ವಪ್ನದಲ್ಲಿ ಅವನ್ನು ಮನವು ಸೃಜಿಸುತ್ತದೆ ಎಂಬುದು ಒಂದು ಪಕ್ಷ. ಅವಿದ್ಯೆಯೇ ಅವನ್ನು ಸೃಜಿಸುತ್ತದೆ ಎಂಬುದು ಇನ್ನೊಂದು ಪಕ್ಷ. ಈ ಎರಡನೆಯ ಪಕ್ಷವನ್ನು ಶ್ರೀ ಮಧುಸೂದನ ಸರಸ್ವತಿಗಳು ಅಂಗೀಕರಿಸಿದ್ದಾರೆ.

ಸ್ವಾಪ್ನಿಕ ಪದಾರ್ಥಕ್ಕೆ ಮನಸ್ಸಿನ ಸಂಸ್ಕಾರವು ನಿಮಿತ್ತವಾದ್ದರಿಂದ ಅದು ಮನಸ್ಸಿನ ಪರಿಣಾಮ ಎಂದು ಕೆಲವು ಕಡೆ ಹೇಳಿದ್ದಾರೆ. ವಾಸ್ತವವಾಗಿ ಸ್ವಾಪ್ನಿಕ ಪದಾರ್ಥವು ಅವಿದ್ಯೆಯ ಪರಿಣಾಮ.

ಈಗ ಸುಷುಪ್ತಿಯ ವಿಚಾರ. ಜಾಗ್ರತ್, ಸ್ವಪ್ನಗಳಲ್ಲಿ ಜೀವನು ಸುಖದುಃಖಗಳ ಭೋಗವನ್ನನುಭವಿಸಿ ಬಳಲಿದಾಗ, ಅವನ ಜಾಗ್ರತ್, ಸ್ವಪ್ನಗಳಿಗೆ ಕಾರಣವಾದ ಕರ್ಮವು ತಾತ್ಕಾಲಿಕವಾಗಿ ಹಿಮ್ಮೆಟ್ಟುತ್ತದೆ. ಆಗ ಜ್ಞಾನಶಕ್ತಿ ಮತ್ತು ಸಂಸ್ಕಾರಗಳಿಂದ ಕೂಡಿದ ಅಂತಃಕರಣವು ತನಗೆ ಕಾರಣವಾದ ಅವಿದ್ಯಾಗತ ಸಂಸ್ಕಾರರೂಪವನ್ನು ತಳೆದು ವಿಶ್ರಮಿಸುತ್ತದೆ. ಈ ವಿಶ್ರಾಂತಿಯೇ ಸುಷುಪ್ತಿ.

ಹಿಂದೆ ಅಂತಃಕರಣದ ಸಂಪೂರ್ಣ ವಿಶ್ರಾಂತಿಯೇ ಸುಷುಪ್ತಿಯಲ್ಲಿದೆಯೆಂದು ಬರೆಯಲಾಗಿತ್ತು. ಮುಂದೆ ಸಿದ್ಧಾಂತಬಿಂದುವಿನಲ್ಲಿಯೂ ಅದರ ವ್ಯಾಖ್ಯಾನದಲ್ಲಿಯೂ ಗಂಭೀರವಾದ ಬಹಳ ವಿಷಯಗಳನ್ನೆತ್ತಿ ಚರ್ಚೆ ಮಾಡಿದ್ದಾರೆ. ತರ್ಕಶೈಲಿಯಲ್ಲಿ ಬೆಳೆಸಿರತಕ್ಕ ಆ ವಿಚಾರಗಳೆಲ್ಲವೂ ತುಂಬ ಕಠಿಣವಾದವು. ಸಾಮಾನ್ಯ ವಾಚಕರಿಗೆ ಕಬ್ಬಿಣದ ಕಡಲೆಯಾಗತಕ್ಕವು. ಪ್ರಾಯೇಣ ಆ ವಾಚಕರಲ್ಲಿ ಯಾರೂ ಅದನ್ನು ಅರ್ಥ ಮಾಡಿಕೊಳ್ಳಲಾರರೆಂದು ತೋರಿದ್ದರಿಂದ ಆ ವಿಚಾರವನ್ನು ಅಲ್ಲಿಗೆ ನಿಲ್ಲಿಸಿ ದಶಶ್ಲೋಕಿಯ ಒಂಬತ್ತನೆಯ ಶ್ಲೋಕವನ್ನೀಗ ಪರಿಶೀಲಿಸೋಣ.

**ಅಪಿ ವ್ಯಾಪಕತ್ವಾತ್ ಹಿತತ್ವಪ್ರಯೋಗಾತ್**
**ಸ್ವತಃಸಿದ್ಧಭಾವಾದನನ್ಯಾಶ್ರಯತ್ವಾತ್ ।**
**ಜಗತ್ತುಚ್ಛಮೇತತ್ ಸಮಸ್ತಂ ತದನ್ಯತ್**
**ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥ ೯ ॥**

ಈ ಶ್ಲೋಕವು ಕಠಿಣವಾಗಿದ್ದರಿಂದ ಪ್ರತಿಪದಾರ್ಥವನ್ನು ಮೊದಲು ಬರೆದು ತಾತ್ಪರ್ಯವನ್ನು ತಿಳಿಸಲಾಗುವುದು. ಅವಸ್ಥಾತ್ರಯದಲ್ಲಿರತಕ್ಕ ವಿಶ್ವತೈಜಸಪ್ರಾಜ್ಞರು ಜೀವರು. ತುರೀಯನಾದ ಸಾಕ್ಷಿಯು ಪರಮಾತ್ಮನಾಗಿದ್ದಾನೆ. ಇದಿಷ್ಟನ್ನು ಸ್ಮರಣೆಗೆ ತಂದುಕೊಳ್ಳಬೇಕು.

**ತದನ್ಯತ್** = ಪರಮಾತ್ಮನಾದ ಸಾಕ್ಷಿಗಿಂತ ಬೇರೆಯಾದ, **ಏತತ್ ಸಮಸ್ತಂ ಜಗತ್** = ಈ ಸಮಸ್ತ ಜಗತ್ತೂ, **ತುಚ್ಛಂ** = ಮಿಥ್ಯೆಯೇ ಸರಿ. **ಅತೋಽನ್ಯದಾರ್ತಂ** ಎಂದು ಉಪನಿಷತ್ತಿನಲ್ಲಿ ಇರುವುದರ (ಬೃಹ. ೩-೪-೨) ಅನುವಾದ ಇದು. ಸಾಕ್ಷಿಗಿಂತ ಈ ಜಗತ್ತು ಭಿನ್ನವಾದದ್ದು. ಏಕೆಂದರೆ ಸಾಕ್ಷಿಯಂತೆ ಈ ಜಗತ್ತು ಇಲ್ಲ. ಸಾಕ್ಷಿಯಾದರೋ, **ಅಪಿ ವ್ಯಾಪಕತ್ವಾತ್** = ಪರಮಾತ್ಮನು ವ್ಯಾಪಕನಾಗಿರುವುದರಿಂದಲೂ, **ಹಿತತ್ವಪ್ರಯೋಗಾತ್** = ಅತ್ಯಂತ

ಪ್ರಿಯಸುಸ್ವರೂಪನಾದ್ದರಿಂದಲೂ, **ಸ್ವತಃಸಿದ್ಧಭಾವಾತ್** = ಸ್ವಯಂಪ್ರಕಾಶನಾದ್ದರಿಂದಲೂ, **ಅನನ್ಯಾಶ್ರಯತ್ವಾತ್** = ಇನ್ನೊಂದು ವಸ್ತುವನ್ನು ಆಶ್ರಯಿಸದೆ ಸ್ವತಃಸಿದ್ಧನಾದ್ದರಿಂದಲೂ ಆತ್ಮನು ಜಗತ್ತಿನಂತಲ್ಲ. ಜಗತ್ತಿನಲ್ಲಿ ವ್ಯಾಪಕತ್ವಾದಿಗಳಿಲ್ಲ. ಆದಕಾರಣ ಆತ್ಮನಿಗಿಂತ ಜಗತ್ತು ಭಿನ್ನವಾದದ್ದು. ಆದ್ದರಿಂದಲೇ ಜಗತ್ತು ಮಿಥ್ಯೆ. ನಾನಾದರೋ ಪ್ರತ್ಯೇಕವಾಗಿ ಅವಶಿಷ್ಟನಾದ ಕೇವಲ ಶಿವನೇ ಆಗಿದ್ದೇನೆ.

**ವಿವರಣೆ: ಸರ್ವಂ ಖಲ್ವಿದಂ ಬ್ರಹ್ಮ** (ಛಾಂ. ೩-೧೪-೧) ಎಂಬ ಶ್ರುತಿಯು ಈ ಸಮಸ್ತ ವಿಶ್ವವೂ ಬ್ರಹ್ಮವೆನ್ನುತ್ತಿದೆ. ದೇಶ ಕಾಲಗಳಿಂದ ಬ್ರಹ್ಮವು ಪರಿಚ್ಛಿನ್ನವಲ್ಲ. ಪರಿಚ್ಛಿನ್ನವಾಗಿದ್ದರೆ ಸರ್ವವ್ಯಾಪಕವಾಗುತ್ತಿರಲಿಲ್ಲ. ಪರಿಚ್ಛಿನ್ನವಲ್ಲದ್ದರಿಂದಲೇ ಇದು ಸರ್ವವ್ಯಾಪಕ. ಅನಾದ್ಯನಂತವಾದ್ದರಿಂದ ಕಾಲದಿಂದಲೂ ಪರಿಚ್ಛಿನ್ನವಲ್ಲ. ಆಕಾಶ ವಾಯುಗಳಿಗೆ ಬ್ರಹ್ಮವೇ ಮೂಲವಾದ್ದರಿಂದ ಅವುಗಳ ವ್ಯಾಪ್ತಿ ಏಕದೇಶದಲ್ಲಿ ಮಾತ್ರ. ಪ್ರಳಯದಲ್ಲಿ ಅವೂ ನಾಶವಾಗುವುದರಿಂದ ಅವು ನಿತ್ಯಗಳಲ್ಲ. ಆತ್ಮನು ಸರ್ವವಸ್ತುಗಳಿಗಿಂತಲೂ ಪ್ರಿಯನೂ ಮೋಕ್ಷಸ್ವರೂಪನೂ ಆದ್ದರಿಂದ ಹಿತನಾಗಿದ್ದಾನೆ. ಮೋಕ್ಷವಾದರೋ ಪರಮಾನಂದರೂಪವಾದದ್ದು. **ಏಷ ಏವ ಪರಮಾನಂದಃ** (ಬೃಹ. ೪-೩-೩೩) **ವಿಜ್ಞಾನಮಾನಂದಂ ಬ್ರಹ್ಮ** (ಬೃಹ ೩-೯-೨೮) ಇತ್ಯಾದಿ ಶ್ರುತಿಗಳು ಪರಬ್ರಹ್ಮದ ಆನಂದಸ್ವರೂಪವನ್ನು ವರ್ಣಿಸುತ್ತವೆ.

ಇಲ್ಲೊಂದು ಪ್ರಶ್ನೆ ಹುಟ್ಟುತ್ತದೆ. ಲೋಕದಲ್ಲಿ ವಿಷಯಭೋಗದಿಂದ ಸುಖವಾಗುತ್ತದೆ. ಇದು ನಿತ್ಯವಲ್ಲ. ಕ್ಷಣಿಕವಾದದ್ದು. ಮೋಕ್ಷಸುಖವು ಮಾತ್ರ ನಿತ್ಯವೆನ್ನುತ್ತೀರಿ. ಸುಖವು ಒಂದೇ ಆದ್ದರಿಂದ ಮೋಕ್ಷಸುಖವು ನಿತ್ಯ, ಲೌಕಿಕಸುಖವು ಕ್ಷಣಿಕ ಎನ್ನುವುದು ಹೇಗೆ? ಹಾಗಲ್ಲ. ವಿಷಯವನ್ನು ಅಂತಃಕರಣವು ಭೋಗಿಸುತ್ತದೆ. ಈ ಭೋಗವೇ ಅಂತಃಕರಣದ ವೃತ್ತಿ (ವ್ಯಾಪಾರ). ಈ ವೃತ್ತಿಯಿಂದ ಸುಖವು ವ್ಯಂಜಿಸಲ್ಪಡುತ್ತದೆ. ಮನೋವೃತ್ತಿಯು ನಾಶವಾದೊಡನೆ ಸುಖವೂ ನಾಶವಾದಂತೆ ತೋರುತ್ತದೆ. ವಾಸ್ತವವಾಗಿ ಸುಖಕ್ಕೆ ನಾಶವಿಲ್ಲ. ದೀಪವಿದ್ದಾಗ ಬಾಹ್ಯವಸ್ತು ಕಾಣಿಸುತ್ತದೆ. ದೀಪವನ್ನಾರಿಸಿದೊಡನೆ ಬಾಹ್ಯ ವಸ್ತು ಕಾಣಿಸುವುದಿಲ್ಲ. ಅಷ್ಟರಿಂದ ಬಾಹ್ಯವಸ್ತುವೇ ನಾಶವಾಗುವುದಿಲ್ಲ. ಈ ಆತ್ಮಾನಂದವು ಸರ್ವರಿಗೂ ನಿತ್ಯಪ್ರಾಪ್ತವಾಗಿಯೇ ಇದೆ. ಜೀವನಿಗೆ ಅವಿದ್ಯೆಯಿರುವುದರಿಂದ ಅದು ಮರೆಯಾಗಿದೆ. ಅವಿದ್ಯೆಯು ಜ್ಞಾನದಿಂದ

ನಿವೃತ್ತವಾದೊಡನೆ ಹೊಸದಾಗಿ ಪ್ರಾಪ್ತವಾಯಿತೋ ಎಂಬಂತೆ ನಿತ್ಯಾನಂದವು ಸ್ಫುರಿಸುತ್ತದೆ. ಅದಕ್ಕಾಗಿ ಮುಮುಕ್ಷುವಾದವನು ಜ್ಞಾನಮಾರ್ಗದಲ್ಲಿ ತೊಡಗುತ್ತಾನೆ. ಆತ್ಮಸ್ವರೂಪವೇ ಆದ ಮೋಕ್ಷವು ಸುಖಾತ್ಮಕವಾದದ್ದು. ಅಜ್ಞಾನವು ಅದನ್ನು ತೋರಗೊಡದೆ ಪರದೆಯಂತೆ ಮರೆಮಾಡಿರುತ್ತದೆ. ದುಃಖನಿವೃತ್ತಿಯು ಆತ್ಮಸ್ವರೂಪವೇ ಎಂದು ತಿಳಿಯಬೇಕು. ಆದ್ದರಿಂದ ಮೋಕ್ಷವು ಪುರುಷಾರ್ಥವೆಂದು ಸಿದ್ಧವಾಗುತ್ತದೆ.

ಈಗ ಇನ್ನೊಂದು ಪ್ರಶ್ನೆ. ಮೋಕ್ಷದಶೆಯಲ್ಲಿ ಆತ್ಮನು ಆನಂದವನ್ನು ಅನುಭವಿಸುವುದು ಹೇಗೆ? ಆಗ ಆತ್ಮನಿಗೆ ದೇಹೇಂದ್ರಿಯಗಳಿರುವುದಿಲ್ಲ. ದೇಹೇಂದ್ರಿಯಗಳು ಆನಂದದ ವ್ಯಂಜಕಗಳು. ಈ ಪ್ರಶ್ನೆಗೆ ಉತ್ತರವಾಗಿ ಶ್ಲೋಕದಲ್ಲಿ **ಸ್ವತಃಸಿದ್ಧಭಾವಾತ್** ಎಂದು ಹೇಳಿದೆ. ಜ್ಞಾನಸುಖಗಳೆರಡೂ ಆತ್ಮನಿಗಿಂತ ಭಿನ್ನವಾಗಿದ್ದರೆ ಆಗ ಜ್ಞಾನವನ್ನು ಉಂಟುಮಾಡುವುದಕ್ಕೂ ಸುಖವನ್ನು ಅಭಿವ್ಯಂಜಿಸುವುದಕ್ಕೂ ಇಂದ್ರಿಯಾದಿ ಸಾಮಗ್ರಿಗಳು ಬೇಕಾಗುತ್ತವೆ. ಆತ್ಮನೇ ಜ್ಞಾನಸ್ವರೂಪನಾದಾಗ ಬೇರೆ ಸಾಮಗ್ರಿಗಳು ಬೇಕಾಗುವುದಿಲ್ಲ. ದೀಪವನ್ನು ತೋರಿಸಲು ಇನ್ನೊಂದು ದೀಪ ಬೇಕಾಗುವುದಿಲ್ಲ. ಹಾಗೆ ಆತ್ಮನೇ ಜ್ಞಾನಸ್ವರೂಪನಾಗಿ ತನ್ನ ಸುಖಸ್ವರೂಪವನ್ನು ತಾನೇ ಅನುಭವಿಸುತ್ತಾನೆ. ಸ್ವತಃಸಿದ್ಧಭಾವ ಎಂದರೆ ಸ್ವಪ್ರಕಾಶಸ್ವರೂಪನೂ ಸ್ವಯಂಸುಖಸ್ವರೂಪನೂ ಆಗಿರುವುದರಿಂದ ಎಂದರ್ಥ.

**ಜಾನಾಮಿ=** ತಿಳಿಯುತ್ತೇನೆ ಎಂದು ಪ್ರಯೋಗಿಸುತ್ತೇವೆ. ಇದು ಕ್ರಿಯಾಪದ. ಧಾತ್ವರ್ಥಜ್ಞಾನವು ಕ್ರಿಯೆಯಾಗುತ್ತದೆ. ಕ್ರಿಯೆಯು ಹೇಗೆ ಆತ್ಮವಾದೀತು? ಎಂಬ ಶಂಕೆ ಹುಟ್ಟಬಹುದು. ಹಾಗಲ್ಲ. 'ಜಾನಾತಿ' ಎಂಬಲ್ಲಿ ಜ್ಞಾನವನ್ನು ಉಂಟುಮಾಡುವ ಆತ್ಮಮನಃಸಂಯೋಗವೆಂಬ ವ್ಯಾಪಾರವು ಧಾತ್ವರ್ಥ. ಅದು ಕ್ರಿಯೆ. ಅಂತಃಕರಣದ ವೃತ್ತಿ. ಈ ವೃತ್ತಿಯನ್ನೇ ಜ್ಞಾನವೆಂದು ಅಧ್ಯಾಸ ಮಾಡಿಕೊಂಡು ಲೋಕದಲ್ಲಿ ಪ್ರಯೋಗಿಸುತ್ತಾರೆ. ಆಗ ಜ್ಞಾನಾಶ್ರಯವಾದದ್ದು ಅಂತಃಕರಣವಾಗುತ್ತದೆ. ಅನಂತರ ಅಂತಃಕರಣ ಆತ್ಮ ಇವುಗಳಿಗೆ ತಾದಾತ್ಮ್ಯವು ಅಧ್ಯಸ್ತವಾಗುತ್ತದೆ. ಆಗ **ಅಹಂ ಜಾನಾಮಿ** 'ನಾನು ತಿಳಿದಿದ್ದೇನೆ' ಎಂಬ ಪ್ರಯೋಗ ಬರುತ್ತದೆ. ಏವಂ ಚ ಜ್ಞಾನವು ಕ್ರಿಯೆಯಲ್ಲ ಆದ್ದರಿಂದ **ಸತ್ಯಂ ಜ್ಞಾನಮನಂತಂ ಬ್ರಹ್ಮ** (ತೈತ್ತಿ. ೨-೧) **ವಿಜ್ಞಾನಮಾನಂದಂ ಬ್ರಹ್ಮ** (ಬೃಹ. ೩-೯-೨೮) ಇತ್ಯಾದಿ ಶ್ರುತಿವಚನಗಳು ಆತ್ಮನನ್ನು ಜ್ಞಾನಸ್ವರೂಪನೆಂದೂ

ಆನಂದಸ್ವರೂಪನೆಂದೂ ಘೋಷಿಸುತ್ತವೆ.

ಈ ಜ್ಞಾನಸುಖಗಳು ನಿತ್ಯವಾದವು. ಜೀವನಿಗೆ ಅಂತಃಕರಣವೃತ್ತಿಗಳಿಂದ ವ್ಯಂಗ್ಯವಾಗುತ್ತವೆ. ಈ ವೃತ್ತಿಗಳು ಹುಟ್ಟುತ್ತವೆ. ನಾಶವಾಗುತ್ತವೆ. ಈ ವೃತ್ತಿಗಳು ಅನಿತ್ಯವಾದ್ದರಿಂದ ವ್ಯಂಗ್ಯಗಳಾದ ಜ್ಞಾನಸುಖಗಳೂ ಅನಿತ್ಯವೆಂದು ಆಪಾತತಃ ತೋರುತ್ತವೆ. ಜ್ಞಾನಾನಂದಗಳು ಗುಣಗಳಲ್ಲ. ಅವು ಸ್ವತಂತ್ರವಾದವು. ಒಬ್ಬ ಆತ್ಮನೇ ಜ್ಞಾನಸ್ವರೂಪನೂ ಆನಂದಸ್ವರೂಪನೂ ಆಗಿದ್ದಾನೆಂದು ತಿಳಿಯಬೇಕು.

ಆದ್ದರಿಂದ ಆತ್ಮನಿಗೆ ಭಿನ್ನವಾದ ಈ ಜಗತ್ತು ತುಚ್ಛವಾದದ್ದು. ಮಿಥ್ಯೆಯೆಂದರ್ಥ. ಜಗತ್ತು ಸುಳ್ಳು, ಜಗತ್ತು ಇಲ್ಲ ಎಂದು ಹೇಳಬೇಕಾದರೆ ಮೊದಲು ಜಗತ್ತು ಇದೆಯೆಂಬ ಜ್ಞಾನವಿರಬೇಕಷ್ಟೇ. **ಅಭಾವಜ್ಞಾನೇ ಪ್ರತಿಯೋಗಿಜ್ಞಾನಂ ಕಾರಣಂ** ಎಂಬುದು ಸರ್ವಸಂಮತವಾದದ್ದು. ಇಲ್ಲಿ ಗಡಿಗೆ ಇಲ್ಲ ಎನ್ನಬೇಕಾದರೆ ಇನ್ನೊಂದು ಕಡೆ ಗಡಿಗೆ ಇದ್ದಿರಬೇಕು. ಮೊಲಕ್ಕೆ ಕೊಂಬು ಇಲ್ಲ ಎಂಬಲ್ಲಿ ಕೊಂಬು ಪ್ರತಿಯೋಗಿ. ಅದು ಎತ್ತು, ಎಮ್ಮೆಗಳಲ್ಲಿದೆ. ಅದರ ಜ್ಞಾನ ನಮಗೆ ಉಂಟು. ಅಂತಹ ಕೊಂಬು ಮೊಲಕ್ಕೆ ಇಲ್ಲ ಎಂದು ಧಾರಾಳವಾಗಿ ಹೇಳಬಹುದು. ಹಾಗೆಯೇ ಜಗತ್ತು ಎಂಬ ಪ್ರತಿಯೋಗಿ ಇನ್ನೊಂದು ಕಡೆ ಇದ್ದಿದ್ದರೆ ಅದು ಇಲ್ಲಿ ಇಲ್ಲ, ಇದು ಜಗತ್ತಲ್ಲ ಎಂದೂ ಹೇಳಬಹುದು. ಸತ್ಯವಾದ ಜಗತ್ತು ಇನ್ನೊಂದು ಕಡೆ ಇಲ್ಲದಿರುವಾಗ ಈ ಜಗತ್ತು ಸುಳ್ಳು ಎಂದು ಹೇಳುವುದು ಹೇಗೆ? ಆದ್ದರಿಂದ 'ಜಗತ್ ತುಚ್ಛಮೇತತ್' ಎಂದು ಹೇಳುವುದು ಅಯುಕ್ತ ಎಂಬ ಶಂಕೆಗೆ ಉತ್ತರವಾಗಿ ಮುಂದಿನ ಶ್ಲೋಕ ಬಂದಿದೆ–

**ನ ಚೈಕಂ ತದನ್ಯದ್ ದ್ವಿತೀಯಂ ಕುತಃ ಸ್ಯಾತ್**
**ನ ವಾ ಕೇವಲತ್ವಂ ನ ಚಾಕೇವಲತ್ವಮ್ ।**
**ನ ಶೂನ್ಯಂ ನ ಚಾಶೂನ್ಯಮದ್ವೈತಕತ್ವಾತ್**
**ಕಥಂ ಸರ್ವವೇದಾಂತಸಿದ್ಧಂ ಬ್ರವೀಮಿ ॥ ೧೦ ॥**

ಈ ಸಾಕ್ಷಿಚೈತನ್ಯವು ಏಕತ್ವಸಂಖ್ಯಾವಿಶಿಷ್ಟವಾದ ಏಕ ಎನ್ನುವಂತಿಲ್ಲ. ಅದಕ್ಕೆ ಭಿನ್ನವಾದ ದ್ವಿತೀಯವು ಎಲ್ಲಿಂದ ಬಂದೀತು? (ಆಗ ಅದ್ವಿತೀಯ ಎನ್ನುವುದು ಹೇಗೆ?) ದ್ವಿತೀಯವಿಲ್ಲದ್ದರಿಂದ ಕೇವಲ ಏಕ ಎನ್ನುವುದು ಸರಿಯಲ್ಲ. ಏಕವಲ್ಲದ್ದರಿಂದ ಅದು ಅಕೇವಲ – ಅನೇಕ ಎನ್ನುವುದು ತಪ್ಪಾಗುತ್ತದೆ. ಅದು ಶೂನ್ಯವೂ ಅಲ್ಲ. ಅಶೂನ್ಯವೂ ಅಲ್ಲ. ಏಕೆಂದರೆ ಅದ್ವೈತವಾದ ಚೈತನ್ಯವು ಇದೆಯೆಂದು ಶ್ರುತಿಯು ಹೇಳುವುದರಿಂದ. ಆದ್ದರಿಂದಲೇ

ಸರ್ವೋಪನಿಷತ್ತುಗಳಿಂದ ಸಿದ್ಧವಾಗುವ ಈ ಚೈತನ್ಯವನ್ನು ಹೇಗೆ ವರ್ಣಿಸಲಿ?

ಏಕತ್ವವು ಗುಣವಾದ್ದರಿಂದ ನಿರ್ಗುಣವಾದ ಚೈತನ್ಯವನ್ನು ಏಕ ಎನ್ನುವುದು ತಪ್ಪಾಗುತ್ತದೆ. ಈ ಸಾಕ್ಷಿಚೈತನ್ಯಕ್ಕಿಂತ ಭಿನ್ನವಾದ ಯಾವ ವಸ್ತುವೂ ಇಲ್ಲವಾದ್ದರಿಂದ ದ್ವಿತೀಯ ವಸ್ತುವಿನ ಪ್ರಸಕ್ತಿಯೇ ಇಲ್ಲ. ಆಗ ಅದ್ವಿತೀಯವಾದದ್ದು ಪರಬ್ರಹ್ಮ ಎನ್ನುವುದೂ ಸ್ವರಸವಾಗುವುದಿಲ್ಲ. ಹಾಗಾದರೆ 'ಏಕಮೇವಾದ್ವಿತೀಯಂ ಬ್ರಹ್ಮ' (ಛಾಂ. ೬-೨-೧) ಎಂದು ಶ್ರುತಿಯು ಪ್ರತಿಪಾದಿಸಿರುವುದು ಹೇಗೆ? ಅಲ್ಲಿ ಏಕತ್ವವು ಅದ್ವಿತೀಯತ್ವವೂ ಅವಿದ್ಯೆಯಿಂದ ಕಲ್ಪಿತವಾಗಿದೆ. ಶ್ರುತಿಯು ಹಾಗೆ ಹೇಳದೇ ಹೋಗಿದ್ದರೆ ಲೋಕದಲ್ಲಿ ಅನೇಕತ್ವವೇ ಕಂಡುಬರುವುದರಿಂದ ಅನೇಕತ್ವವೇ ಎಂದರೆ ದ್ವೈತವೇ ಸಿದ್ಧಾಂತವಾಗಿ ಉಳಿದುಬಿಡುತ್ತಿತ್ತು.

ಹಾಗಾದರೆ ಬೌದ್ಧರ ಮತದಂತೆ ಪರಮಸತ್ಯವಾದದ್ದು ಶೂನ್ಯ ಎಂದು ಬಿಡೋಣ! ಅದು ಯುಕ್ತವಲ್ಲ. **ಅಸನ್ನೇವ ಸ ಭವತಿ । ಅಸದ್‌ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೆದ್ವೇದ ಸಂತಮೇನಂ ತತೋ ವಿದುಃ** (ತೈತ್ತಿ. ೨-೬-೧) ಎಂದು ಉಪನಿಷತ್ತು ಶೂನ್ಯವಾದವನ್ನು ತಿರಸ್ಕರಿಸಿದೆ. ಇದರ ಅರ್ಥ - ಬ್ರಹ್ಮವು "ಅಸತ್" (ಶೂನ್ಯ) ಎಂದು ತಿಳಿದರೆ ಹಾಗೆ ತಿಳಿಯುವಾತನು ಶೂನ್ಯನೇ ಆಗಿ ಬಿಡುತ್ತಾನೆ. ಬ್ರಹ್ಮವು 'ಅಸ್ತಿ'(ಇದೆ) ಎಂದು ತಿಳಿದರೆ ಮಾತ್ರ ಆತನು ಸಜ್ಜನನೆಂದು ವೇದಾಂತಿಗಳು ತಿಳಿಯುತ್ತಾರೆ. ಹಾಗಾದರೆ ಅಶೂನ್ಯವೆನ್ನುವಂತೆಯೂ ಇಲ್ಲ. ಆಗ ಮೊದಲು ಹೇಳಿದಂತೆ ಏಕವೋ ಅದ್ವಿತೀಯವೋ? ಇತ್ಯಾದಿ ಪ್ರಶ್ನೆಗಳು ಹುಟ್ಟುತ್ತವೆ. ಇದಕ್ಕೆ ಉತ್ತರವೇನೆಂದರೆ **ಅದ್ವೈತಕತ್ವಾತ್**. ಏಕಮೇವಾದ್ವಿತೀಯಂ ಬ್ರಹ್ಮ ಎಂಬ ಶ್ರುತಿಯಲ್ಲಿ ಏಕ, ಅದ್ವಿತೀಯ ಎಂಬುದು ಅವಿದ್ಯಾಕಲ್ಪಿತವಾದುದರ ಅನುವಾದವೆಂದು ಹಿಂದೆ ಹೇಳಿದ್ದೇವೆ. ಬೇರೆ ಸಜಾತೀಯ ವಸ್ತು ಇಲ್ಲವೆಂದು ಏಕಶಬ್ದವೂ ವಿಜಾತೀಯವಾದ ಇನ್ನೊಂದು ವಸ್ತುವಿಲ್ಲವೆಂಬುದನ್ನು ಅದ್ವಿತೀಯ ಶಬ್ದವೂ ಬೋಧಿಸುತ್ತದೆ. ಹೀಗಿದ್ದರೂ 'ಏವ' ಎಂಬ ಇನ್ನೊಂದು ಶಬ್ದವಿದೆ. ಅದು ಬ್ರಹ್ಮವಸ್ತುವಿನಲ್ಲಿ ಯಾವ ಧರ್ಮವೂ ಇಲ್ಲ, ಅದು ಧರ್ಮಿಯೂ ಅಲ್ಲ ಎಂಬುದನ್ನು ತಿಳಿಸುತ್ತದೆ.

ಏಕಶಬ್ದದಿಂದ ಸಜಾತೀಯುವು ನಿಷಿದ್ಧವಾಗುವುದರಿಂದ ಅನೇಕಾತ್ಮವಾದವು ನಿರಸ್ತವಾಗುವುದೆಂದು ತಿಳಿಯಬೇಕು. ಅದ್ವಿತೀಯ

ಶಬ್ದದಿಂದ ವಿಜಾತೀಯವಾದ ಜಗತ್ತು ಇಲ್ಲವೆಂದೂ ಮಿಥ್ಯೆಯೆಂದೂ ಸಿದ್ಧವಾಗುತ್ತದೆ. ಶ್ಲೋಕದಲ್ಲಿ 'ಕಥಂ ಬ್ರವೀಮಿ' ಎಂದು ಹೇಳಿದೆ. ಆ ಬ್ರಹ್ಮವಸ್ತುವನ್ನು ಹೇಗೆ ವರ್ಣಿಸಲಿ? ಶಬ್ದಗಳಿಂದ ವರ್ಣಿಸುವುದು ಶಕ್ಯವಲ್ಲವೆಂದು ಅಭಿಪ್ರಾಯ. "ಯತೋ ವಾಚೋ ನಿವರ್ತಂತೇ, ಅವಚನೇನೈವ ಪ್ರೋವಾಚ" – ಇತ್ಯಾದಿ ಶ್ರುತಿಗಳು ಬ್ರಹ್ಮವು ವಾಕ್ಕಿಗೆ ಗೋಚರವಲ್ಲವೆಂದೂ ಅದು ಸ್ವಯಂಪ್ರಕಾಶವೆಂದೂ ತಿಳಿಸುತ್ತವೆ. ಹಾಗೆಯೇ ಮನಸ್ಸಿಗೂ ಗೋಚರವಲ್ಲ. ಬ್ರಹ್ಮವು ಹೀಗಿದೆ ಎಂದು ಊಹಿಸಿಕೊಳ್ಳಲು ಶಕ್ಯವಿಲ್ಲದ್ದು.

**ಯನ್ಮನಸಾ ನ ಮನುತೇ**
**ಯೇನಾಹುರ್ಮನೋ ಮತಮ್ ।**
**ತದೇವ ಬ್ರಹ್ಮ ತ್ವಂ ವಿದ್ಧಿ**
**ನೇದಂ ಯದಿದಮುಪಾಸತೇ ॥ (ಕೇನ ೧–೫)**

ಯಾವುದನ್ನು ಮನಸ್ಸಿನಿಂದ ಮಾನವನು ತಿಳಿಯಲಾರನೋ, ಯಾವುದರಿಂದ ಮನಸ್ಸೇ ತಿಳಿಯಲ್ಪಡುವುದೋ ಅದು ಬ್ರಹ್ಮವೆಂದು ತಿಳಿ. ಜನರು ಉಪಾಸನೆ ಮಾಡತಕ್ಕ ಪ್ರತಿಮೆ ಮುಂತಾದದ್ದು ಬ್ರಹ್ಮವಲ್ಲ.

ಅವಿದ್ಯೆಯು ಕಲ್ಪಿಸಿದ ಸಕಲ ಅನರ್ಥಗಳು ವೇದಾಂತವಾಕ್ಯಗಳ ಪರ್ಯಾಲೋಚನೆ, ಮನನಾದಿಗಳಿಂದ ನಿವೃತ್ತವಾಗುವುದರಿಂದ ಮುಮುಕ್ಷುವು ಪರಮಾನಂದಸ್ವರೂಪನೇ ಆಗಿ ಕೃತಕೃತ್ಯನಾಗುವನು.

* * * * *

# ೨. ಏಕಶ್ಲೋಕೀ

**ಕಿಂ ಜ್ಯೋತಿಸ್ತವ ಭಾನುಮಾನಹನಿ ಕಿಂ ರಾತ್ರೌ ಪ್ರದೀಪಾದಿಕಂ**
**ಸ್ಯಾದೇವಂ ರವಿದೀಪದರ್ಶನವಿಧೌ ಕಿಂ ಜ್ಯೋತಿರಾಖ್ಯಾಹಿ ಮೇ।**
**ಚಕ್ಷುಸ್ತಸ್ಯ ನಿಮೀಲನಾದಿಸಮಯೇ ಕಿಂ ಧೀರ್ಧಿಯೋ ದರ್ಶನೇ**
**ಕಿಂ ತತ್ರಾಹಮತೋ ಭವಾನ್ ಪರಮಕಂ ಜ್ಯೋತಿಸ್ತದಸ್ಮಿ ಪ್ರಭೋ ॥ ೧ ॥**

(ಆತ್ಮನು ಸ್ವಯಂಜ್ಯೋತಿಯು, ಸ್ವಪ್ರಕಾಶನು, ತಾನೇ ಇತರ ವಸ್ತುಗಳನ್ನು ಬೆಳಗುವವನೇ ವಿನಾ (ಅರಿಯುವವನೇ ವಿನಾ) ತಾನು ಇತರರ ಸಹಾಯದಿಂದ ಬೆಳಗುವವನಲ್ಲ. ಈ ವಿಷಯವನ್ನು ತಿಳಿಸಲು ಆಚಾರ್ಯರು ಗುರುಶಿಷ್ಯ ಸಂವಾದ ರೂಪವಾದ ಈ ಸುಂದರ ಪದ್ಯವನ್ನು ರಚಿಸಿದ್ದಾರೆ.)

ಗುರು – ಶಿಷ್ಯ! ನಿನಗೆ ನಿನ್ನ ಸಕಲ ವ್ಯವಹಾರಗಳನ್ನು ನಡೆಸಲು ಸಹಾಯವಾದ ಬೆಳಕು ಯಾವುದು?

ಶಿಷ್ಯ – ಗುರುಗಳೆ: ಹಗಲಿನಲ್ಲಿ ನನ್ನ ವ್ಯವಹಾರಕ್ಕೆ ಸೂರ್ಯನೇ ಬೆಳಕು, ರಾತ್ರಿಯಲ್ಲಿ ದೀಪ ಮುಂತಾದವು ಬೆಳಕುಗಳು.

ಗುರು – ಅದು ಸರಿ. ಈ ಸೂರ್ಯನನ್ನು, ದೀಪವನ್ನು ನೋಡಲು ಬೇಕಾದ ಬೆಳಕು ಯಾವುದು?

ಶಿಷ್ಯ – ಕಣ್ಣು, ಕಣ್ಣಿನ ಸಹಾಯದಿಂದ ಅವುಗಳನ್ನು ಅರಿಯುತ್ತೇನೆ.

ಗುರು – ಆ ಕಣ್ಣುಗಳನ್ನು ಮುಚ್ಚಿಕೊಂಡಾಗ ವ್ಯವಹಾರ ಹೇಗೆ?

ಶಿಷ್ಯ : ಆಗ ಬುದ್ಧಿಯೇ ನನ್ನ ಬೆಳಕು, ಆ ಬುದ್ಧಿಯಿಂದಲೇ ಎಲ್ಲವನ್ನೂ ಅರಿಯುತ್ತೇನೆ.

ಗುರು – ಆ ಬುದ್ಧಿಯನ್ನು ಅರಿಯುವ ಸಾಧನವಾದ ಬೆಳಕು ಯಾವುದು?

ಶಿಷ್ಯ – ಅದು ನಾನೆ. ಸ್ವತಃ ನಾನೇ ಬುದ್ಧಿಯನ್ನು ಅರಿಯುತ್ತೇನೆ.

ಗುರು – ಆದ್ದರಿಂದ ನೀನೇ ಎಲ್ಲ ಬೆಳಕುಗಳಿಗೂ ಬೆಳಕು. ಪರಂಜ್ಯೋತಿ ಎಂದು ತಿಳಿದು ಬರುವುದಿಲ್ಲವೆ?

ಶಿಷ್ಯ – ಹೌದು ಗುರುಗಳೆ, ನಾನು ಸ್ವಯಂಪ್ರಕಾಶನು, ಎಲ್ಲವನ್ನೂ ಅರಿಯುವವನು.

(ಹೀಗೆ ಗುರುವಿನ ಪ್ರಶ್ನೆಯ ಮೂಲಕವಾಗಿ ಶಿಷ್ಯನು ತಾನೇ ಎಲ್ಲವನ್ನೂ ಅರಿಯುವ ಸ್ವಯಂ ಜ್ಯೋತಿ ಸ್ವರೂಪನೆಂದು ತಿಳಿದುಕೊಂಡನು.)

# ೩. ಶ್ರೀ ದಕ್ಷಿಣಾಮೂರ್ತಿ ಸ್ತೋತ್ರ

ಶ್ರೀ ಶಂಕರ ಭಗವತ್ಪಾದರು ರಚಿಸಿದ ಸ್ತೋತ್ರಗಳಲ್ಲಿ **ಶ್ರೀ ದಕ್ಷಿಣಾಮೂರ್ತಿಸ್ತೋತ್ರವು** ಪ್ರಸಿದ್ಧವಾಗಿದೆ. ಆಚಾರ್ಯರು ರಚಿಸಿದ ಸ್ತೋತ್ರಗಳೆಂದು ಬೇರೆ ಬೇರೆ ದೇವತೆಗಳ ಹಲವಾರು ಸ್ತೋತ್ರಗಳಿದ್ದರೂ ಇದು ಮಾತ್ರ ನಿಃಸಂದೇಹವಾಗಿ ಶ್ರೀ ಶಂಕರಾಚಾರ್ಯರು ವಿರಚಿಸಿದುದೇ ಹೌದು. ಏಕೆಂದರೆ, ಆಚಾರ್ಯರ ಸಾಕ್ಷಾತ್ ಶಿಷ್ಯರಾದ ಶ್ರೀ ಸುರೇಶ್ವರಾಚಾರ್ಯರೇ ಇದಕ್ಕೆ ಮಾನಸೋಲ್ಲಾಸವೆಂಬ ಶ್ಲೋಕರೂಪವಾದ ವಾರ್ತಿಕಗಳನ್ನು ಬರೆದಿದ್ದಾರೆ. ಈ ವಾರ್ತಿಕಗಳು ಸ್ತೋತ್ರದ ಗಂಭೀರಾರ್ಥಗಳನ್ನು ಬಹಳ ಸೊಗಸಾಗಿ ವಿವರಿಸುತ್ತವೆ. ಈ ಸ್ತೋತ್ರದಲ್ಲಿ ಒಟ್ಟು ಹತ್ತು ಶ್ಲೋಕಗಳಿವೆ. ಮಾನಸೋಲ್ಲಾಸವು ವಿವರಿಸಿದಂತೆ ಸ್ತೋತ್ರವನ್ನು ವಾಖ್ಯಾನಿಸುವುದಕ್ಕಾಗಿ ಈ ಲೇಖನ ಉದ್ಯುಕ್ತವಾಗಿದೆ.

ವಿಶೇಷವೆಂದರೆ ಈ ಸ್ತೋತ್ರಗಳಲ್ಲಿ ಅದ್ವೈತವೇದಾಂತದ ಸಾರವು ಸ್ಪಷ್ಟವಾಗಿ ಕಂಗೊಳಿಸುತ್ತದೆ. ದೇವತೆಯ ವರ್ಣನಾರೂಪವಾದ ಕಲ್ಪನೆ ಇಲ್ಲಿಲ್ಲ. ಜ್ಞಾನ-ಭಕ್ತಿ ಇವೆರಡರ ಹೃದಯಂಗಮವಾದ ಸಂಗಮವನ್ನು ಇಲ್ಲಿ ಕಾಣಬಹುದು.

ದಕ್ಷಿಣಾಮೂರ್ತಿ ಎಂದರೆ ಸಾಕ್ಷಾತ್ ಪರಮೇಶ್ವರನ ಅವತಾರ. ಈ ವಿಷಯವಾಗಿ ಒಂದು ಚಮತ್ಕಾರಿಯಾದ ಕಥೆ ಇದೆ. ಅದರ ಮೂಲ ತಿಳಿಯದು.

ಒಮ್ಮೆ ಸನಕ ಸನಂದನಾದಿ ಮಹರ್ಷಿಗಳು ಚಿಂತಾಮಗ್ನರಾಗಿ ಕುಳಿತಿದ್ದರಂತೆ. ತ್ರಿಲೋಕ ಸಂಚಾರಿಗಳಾದ ನಾರದರು ಅಲ್ಲಿಗೆ ಬಂದಿಳಿದರು. ಚಿಂತಾಕುಲರಾಗಿದ್ದ ಸನಕಾದಿಗಳನ್ನು ಕುರಿತು ಚಿಂತೆಗೆ ಕಾರಣವೇನೆಂದು ಕೇಳಿದರು. ಸನಕಾದಿಗಳಲ್ಲೊಬ್ಬರು ಹೀಗೆ ಉತ್ತರಿಸಿದರು. "ನಾರದರೆ, ನಾವು ಪರಬ್ರಹ್ಮತತ್ತ್ವವನ್ನರಿಯಲು ಉತ್ಸುಕರಾಗಿದ್ದೇವೆ. ನಮಗಿರುವ ಕೆಲವು ಸಂಶಯಗಳನ್ನು ಪರಿಹರಿಸಲು ಸಮರ್ಥರಾದವರು ಯಾರೂ ಕಾಣಿಸಲಿಲ್ಲ. ಆದ್ದರಿಂದ ಚಿಂತಾಕ್ರಾಂತರಾಗಿದ್ದೇವೆ". ಆಗ ನಾರದರು "ಬ್ರಹ್ಮದೇವನಿದ್ದಾನಲ್ಲ, ಆತನು ನಿಮ್ಮ ಸಂಶಯಗಳನ್ನು ಪರಿಹರಿಸುತ್ತಾನೆ. ನನ್ನೊಡನೆ ಬನ್ನಿರಿ. ಬ್ರಹ್ಮನನ್ನು ಭೇಟಿ ಮಾಡಿಸುತ್ತೇನೆ" ಎಂದರು. ಸನಕಾದಿಗಳು ಸಂತೋಷದಿಂದ ನಾರದರನ್ನು ಹಿಂಬಾಲಿಸಿದರು. ನಾರದರು ಅವರನ್ನು ಸತ್ಯಲೋಕಕ್ಕೆ ಕರೆದುಕೊಂಡು ಹೋಗಿ

ಬ್ರಹ್ಮನಿದ್ದ ಸ್ಥಳಕ್ಕೆ ಬಂದರು. ಸರಸ್ವತಿಯು ವೀಣೆಯನ್ನು ನುಡಿಸುತ್ತಿದ್ದಳು. ಬ್ರಹ್ಮನು ಅದನ್ನು ಆಲಿಸುತ್ತ ಆನಂದದಿಂದ ತಲೆದೂಗುತ್ತಿದ್ದನು. ಅದನ್ನು ಕಂಡೊಡನೆ ಸನಕಾದಿಮುನಿಗಳು ಸಿಟ್ಟಿನಿಂದ ಹೊರಗೆ ಬಂದು "ನಾರದರೆ, ಈ ಬ್ರಹ್ಮನು ವೀಣಾಧ್ವನಿಯನ್ನು ಕೇಳುತ್ತ ತಲೆದೂಗುತ್ತಿದ್ದಾನೆ. ಈ ಸ್ತ್ರೀಲಂಪಟನು ಏನನ್ನು ನಮಗೆ ತಿಳಿಸಬಲ್ಲ?" ಎಂದರು. ಆಗ ನಾರದರು ಅವರಿಗೆ ಏನೋ ಸಮಾಧಾನವನ್ನು ಹೇಳಿ ವಿಷ್ಣುಲೋಕಕ್ಕೆ ಕರೆದುಕೊಂಡು ಹೋದರು. ವಿಷ್ಣು ಸುಪ್ಪತ್ತಿಗೆಯಲ್ಲಿ ಕಾಲ್ನೀಡಿ ಮಲಗಿದ್ದ. ಲಕ್ಷ್ಮೀದೇವಿ ಅವನ ಪಾದಗಳನ್ನು ನೀವುತ್ತಿದ್ದಳು. ಈ ಮಹರ್ಷಿಗಳು ಅದನ್ನು ನೋಡಿದೊಡನೆ ಹೊರಗೆ ನಡೆದರು. ನಾರದರನ್ನು ದೂರಿದರು. ಆಗ ನಾರದರು ಹೇಗೋ ತಮ್ಮ ವಾಗ್‌ಜಾಲದಿಂದ ಅವರನ್ನು ಸಮಾಧಾನ ಪಡಿಸಿ ಈಶ್ವರನ ಬಳಿಗೆ ಕರೆದೊಯ್ದರು. ಎಲ್ಲರೂ ಕೈಲಾಸವನ್ನು ಸೇರಿ ಶಿವನ ಆಸ್ಥಾನವನ್ನು ಪ್ರವೇಶಿಸಿದರು. ಅಲ್ಲಿಯ ದೃಶ್ಯ ಇನ್ನೂ ವಿಚಿತ್ರವಾಗಿತ್ತು.! ಶಿವನು ಪಾರ್ವತಿಯೊಡನೆ ಅದ್ಭುತವಾದ ನಾಟ್ಯದಲ್ಲಿ ತೊಡಗಿ ಪಾರ್ವತಿಯ ಕೈ ಹಿಡಿದು ನರ್ತಿಸುತ್ತಿದ್ದ!

ಸನಕ ಸನಂದನಾದಿಗಳು ಬೇಸತ್ತು ನಾರದರನ್ನು ಹಂಗಿಸುತ್ತಾ ತಾವು ಹಿಂದೆ ಕುಳಿತಿದ್ದ ಸ್ಥಳಕ್ಕೆ ಹೊರಟರು. ಇದೆಲ್ಲವನ್ನೂ ತಿಳಿದ ಸರ್ವಜ್ಞನಾದ ಪರಮೇಶ್ವರನು ಪರಮ ವೈರಾಗ್ಯ ಮೂರ್ತಿಯಾಗಿ ಒಂದು ವಟವೃಕ್ಷದ ಕೆಳಗೆ ಪ್ರತ್ಯಕ್ಷನಾದನು. ಆತನ ತೇಜಸ್ಸನ್ನು ಕಂಡು ಬೆರಗಾಗಿ ಈ ಋಷಿಗಳು ಭಕ್ತಿಯಿಂದ ನಮಸ್ಕರಿಸಿ ಎದುರಿಗೆ ಕುಳಿತುಕೊಂಡರು. ಆ ಸಮಯದಲ್ಲಿ ಈಶ್ವರನು ದಕ್ಷಿಣಾಭಿಮುಖವಾಗಿ ಕುಳಿತಿದ್ದುದರಿಂದ ದಕ್ಷಿಣಾಮೂರ್ತಿಯೆಂದು ಪ್ರಸಿದ್ಧನಾದನು.

ಆತನು ಸನಕಾದಿಗಳ ಸಂದೇಹವನ್ನು ಪರಿಹರಿಸಿದ ಗುರುಮೂರ್ತಿಯೆನಿಸಿದನು. ಆ ದಕ್ಷಿಣಾಮೂರ್ತಿಯ ಸ್ತೋತ್ರವಿದು.

**ವಿಶ್ವಂ ದರ್ಪಣ ದೃಶ್ಯಮಾನನಗರೀತುಲ್ಯಂ ನಿಜಾಂತರ್ಗತಂ**
**ಪಶ್ಯನ್ನಾತ್ಮನಿ ಮಾಯಯಾ ಬಹಿರಿವೋದ್ಭೂತಂ ಯಥಾ ನಿದ್ರಯಾ ।**
**ಯಃ ಸಾಕ್ಷಾತ್ ಕುರುತೇ ಪ್ರಬೋಧಸಮಯೇ ಸ್ವಾತ್ಮಾನಮೇವಾದ್ವಯಂ**
**ತಸ್ಮೈ ಶ್ರೀ ಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥ ೧ ॥**

**ತಾತ್ಪರ್ಯ:** ಯಾವ ಪರಮಾತ್ಮನು ಮಾಯೆಯಿಂದ ಜೀವಾತ್ಮನಾಗಿ ನಿದ್ರಿಸುವಾಗ ತನ್ನ

ಮನಸ್ಸಿನಲ್ಲಿ ಕಲ್ಪಿತವಾದ ಜಗತ್ತನ್ನು ಹೊರಗಡೆ ಇರುವಂತೆ ಕಾಣುತ್ತಾನೋ, ಜಾಗ್ರತ್ತಿನಲ್ಲಿಯೂ ಸಹ ತನ್ನಲ್ಲಿಯೇ ಅಡಕವಾದ ಈ ವಿಶ್ವವನ್ನು ಕನ್ನಡಿಯಲ್ಲಿ ಪ್ರತಿಬಿಂಬಿಸಿದ ನಗರಿಯನ್ನು ಹೇಗೋ ಹಾಗೆ, ಹೊರಗೆ ಇರುವಂತೆ ನೋಡುತ್ತಿರುವನೋ, ಮತ್ತೆ ಜ್ಞಾನೋದಯವಾದಾಗ ಅದ್ವಿತೀಯಾತ್ಮನಾದ ತನ್ನ ನಿಜಸ್ವರೂಪವನ್ನು ಮಾತ್ರ ಸಾಕ್ಷಾತ್‌ಕರಿಸಿಕೊಳ್ಳುವನೋ ಆ ಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ಈ ನಮಸ್ಕಾರವು ಅರ್ಪಿತವಾಗಲಿ.

ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲವೆಂದು ಋಷಿಗಳು ತಿಳಿದಿದ್ದರು. ಅಂತಹ ಶ್ರೇಷ್ಠವಾದ ಆತ್ಮ ಸಾಕ್ಷಾತ್ಕಾರವು ದೊರಕುವುದು ಶ್ರೀಪರಮೇಶ್ವರನ ಅನುಗ್ರಹದಿಂದಲೇ. ಪರಮೇಶ್ವರನೇ ಶ್ರೀ ಗುರುವಿನ ರೂಪದಿಂದ ಬಂದು ನಮ್ಮನ್ನು ಅನುಗ್ರಹಿಸಬೇಕಾಗಿದೆಯಾದ್ದರಿಂದ ಆತನ ಅನುಗ್ರಹವಾಗಲೆಂದು ಶ್ರೀಗುರುರೂಪನಾದ ಪರಮಾತ್ಮನನ್ನು ನಮಸ್ಕರಿಸಬೇಕು. ಆ ಪರಮಾತ್ಮನಾದರೋ ತಾನು ಸೃಜಿಸಿದ ಜಗತ್ತನ್ನು ತಾನೇ ಪ್ರವೇಶಿಸಿರುತ್ತಾನೆಂದು ಶ್ರುತಿಯು ಹೇಳುತ್ತದೆ. **ತತ್ ಸೃಷ್ಟ್ವಾ ತದೇವಾನುಪ್ರಾವಿಶತ್** (ತೈ-೨-೬) ಈ ಮನುಷ್ಯದೇಹವು ಜಗತ್ತಿನಲ್ಲಿ ಸೇರುತ್ತದೆ. ಈ ನಮ್ಮ ದೇಹವನ್ನು ಸೃಜಿಸಿ ಇದರೊಳಗೆ ತಾನು ಸೇರಿಕೊಂಡಿದ್ದಾನೆಂದು ಇದರಿಂದ ಗೊತ್ತಾಗುತ್ತದೆ. ಆದ್ದರಿಂದ 'ನಾನು' ಎಂಬ ಚೇತನ ಪದಾರ್ಥವು ವಸ್ತುತಃ ಪರಮಾತ್ಮನೇ ಆಗಿರುತ್ತಾನೆ.

ಅಸ್ತಿ (ಇದೆ), ಭಾತಿ (ಪ್ರಕಾಶಿಸುತ್ತದೆ, ಗೋಚರಿಸುತ್ತದೆ) ಎಂಬ ಎರಡು ಅಂಶಗಳು ಪ್ರತಿಯೊಂದು ವಸ್ತುವಿನಲ್ಲಿಯೂ ನಮಗೆ ಕಂಡು ಬರುತ್ತವೆ. ಈ ಅಸ್ತಿತ್ವ, ಈ ಪ್ರಕಾಶತ್ವ (ಪ್ರಕಾಶ) ಇವು ಪರಮಾರ್ಥವಾಗಿ ಯಾವ ವಸ್ತುವಿನಲ್ಲಿವೆ ಎಂಬುದು ಈಗ ವಿಚಾರಣೀಯ. "ಈಶ್ವರನು ಜಗತ್ತನ್ನು ಸೃಷ್ಟಿಸಿ ಅದರೊಳಗೆ ಪ್ರವೇಶಿಸಿದನು" ಎಂದು ಶ್ರುತಿಯು ಹೇಳಿರುವುದರಿಂದ ಶಿಷ್ಯನಿಗೆ ಈ ರೀತಿಯ ಸಂಶಯ ಬರುತ್ತದೆ. "ಸೃಷ್ಟಿಸಿದ ದೇವರೊಬ್ಬನಿದ್ದಾನೆ. ಜೀವನಾದ ನಾನು ಇದ್ದೇನೆಂಬುದು ಸ್ವಯಂ ತಿಳಿದೇ ಇದೆ. ಈಶ್ವರನು ಸೃಜಿಸಿದ ಜಗತ್ತು ಕಾಣುತ್ತಲೇ ಇದೆ. ಹೀಗೆ ಮೂರು ಪದಾರ್ಥಗಳಾದವು. ಈಶ್ವರ, ಜೀವ, ಜಗತ್ತು. ಅಸ್ತಿ, ಭಾತಿ ಎಂಬಿವು ಇವುಗಳ ಪೈಕಿ ಯಾವುದರಲ್ಲಿವೆ? ಈಶ್ವರನಲ್ಲಿಯೋ, ಜೀವನಲ್ಲಿಯೋ ಅಥವಾ ನಮಗೆ ಗೋಚರಿಸುವ ಆಯಾ ಪದಾರ್ಥದಲ್ಲಿಯೋ? ಮತ್ತು ಈಶ್ವರನೆಂದರೇನು, ಜೀವನೆಂದರೇನು ಸರ್ವವಸ್ತುವಿನಲ್ಲಿಯೂ ಸೇರಿಕೊಂಡು

ಅವುಗಳ ಆತ್ಮನಾಗಿರುವುದೆಂದರೇನು? ಇವೆಲ್ಲವನ್ನೂ ಮನುಷ್ಯನು ತಿಳಿದುಕೊಳ್ಳುವುದು ಹೇಗೆ? ಅದಕ್ಕೆ ಸಾಧನವೇನು? ತಿಳಿದುದಕ್ಕೆ ಫಲವಾದರೂ ಯಾವುದು? ಅದ್ವೈತದ ಪ್ರಕಾರ ಒಂದೇ ವಸ್ತುವಿದೆ, ಎರಡನೆಯ ವಸ್ತುವೇ ಇಲ್ಲ ಎಂಬುದಾದರೂ ಹೇಗೆ ಹೊಂದುತ್ತದೆ? ಈಶ್ವರನು ಸರ್ವಜ್ಞ, ಸರ್ವಕರ್ತ ಎಂಬುದಾದರೂ ಹೇಗೆ ಹೊಂದುತ್ತದೆ? ಒಂದೇ ವಸ್ತುವಿದ್ದಾಗ ಸರ್ವವೆಂಬುದು ಇನ್ನೊಂದು ಇಲ್ಲವಾದ್ದರಿಂದ ಸರ್ವವನ್ನು ತಿಳಿದಿದ್ದಾನೆ, ಸರ್ವವನ್ನೂ ಸೃಷ್ಟಿಸಿದ್ದಾನೆ ಎಂಬ ಮಾತು ಕೂಡುವುದೇ ಇಲ್ಲ, ಎಂದು ಶಿಷ್ಯನ ಸಂಶಯರಾಶಿ.

ಈ ರೀತಿಯ ಸಂಶಯಗಳು ನಮ್ಮೆಲ್ಲರಿಗೂ ಬರುತ್ತವೆ. ಇವುಗಳಿಗೆ ಸಮಾಧಾನವನ್ನು ಶ್ರೀ ಶಂಕರರೇ ಶ್ರೀ ದಕ್ಷಿಣಾಮೂರ್ತಿ ಸ್ತೋತ್ರದಲ್ಲಿ ಕೃಪೆಯಿಂದ ತಿಳಿಸಿಕೊಟ್ಟಿದ್ದಾರೆ.

ಈಗ ಮೊದಲನೆಯ ಶ್ಲೋಕದ ತಾತ್ಪರ್ಯವನ್ನು ಪರಿಶೀಲಿಸೋಣ.

ನಾವು ಕನಸಿನಲ್ಲಿ ನಾನಾ ವ್ಯಕ್ತಿಗಳನ್ನೂ, ಪ್ರಾಣಿಗಳನ್ನೂ, ಜಡವಸ್ತುಗಳನ್ನೂ ನೋಡುತ್ತೇವೆ. ಅವುಗಳ ಕ್ರಿಯೆಗಳೂ ಕಾಣಿಸುತ್ತವೆ. ಮಾತುಗಳೂ ಕೇಳಿಸುತ್ತವೆ. ಅಸ್ತಿ, ಭಾತಿ ಎಂಬ ಎರಡು ಅಂಶಗಳೂ ಅಲ್ಲಿರುತ್ತವಷ್ಟೆ. ನಿದ್ರೆಯಿಂದ ಎಚ್ಚರಾದ ಮೇಲೆ ಅವು ಎಲ್ಲಿ ಹೋದವು? ಅವು ಎಲ್ಲಿಗೂ ಹೋಗಲಿಲ್ಲ. ಎಲ್ಲಿಂದಲೂ ಬರಲೂ ಇಲ್ಲ. ನಮ್ಮ ಮನಸ್ಸಿನಲ್ಲಿಯೇ ಅಡಗಿದ್ದವು. ಅಲ್ಲಿಯೇ ಅಡಗಿಕೊಂಡವು. ಕನಸು ಕಂಡವನು ಮಾತ್ರ ಇದ್ದವನು. ಇನ್ನು ಯಾವುದೂ ಇರಲಿಲ್ಲವೆಂಬುದು ನಿಶ್ಚಯ. ಈ ಜಗತ್ತು ನಾಮರೂಪಗಳ ರಾಶಿ. ನಾಮ ಎಂದರೆ ಹೆಸರು ; ರೂಪ ಎಂದರೆ ಆ ಹೆಸರನ್ನು ಪಡೆದ ವಸ್ತು. ಜಗತ್ತಿನಲ್ಲಿ ಕಾಣುವ ವಸ್ತು ಮಾಯೆಯಿಂದ ಕಲ್ಪಿತವಾದದ್ದು. ಕನಸಿನಲ್ಲಿ ಕಾಣುವ ಜಗತ್ತು ನಿದ್ರೆಯಿಂದ ಕಲ್ಪಿತವಾದದ್ದು. ಹೊರ ಜಗತ್ತಿನ ಪ್ರತಿಬಿಂಬವೇ ಕನಸಿನ ಒಳಜಗತ್ತು. ಆತ್ಮನು ಸ್ವಚ್ಛವಾದ ಕನ್ನಡಿ ಇದ್ದಂತೆ. ದೊಡ್ಡ ನಿಲುಗನ್ನಡಿಯನ್ನು ಹಿಡಿದಾಗ ಹೊರಗಿನ ನಗರವು ಕನ್ನಡಿಯಲ್ಲಿ ಪ್ರತಿಬಿಂಬಿಸುತ್ತದೆ. ಈ ಬಿಂಬ ಪ್ರತಿಬಿಂಬಗಳಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದು. ಇದೊಂದು ದೃಷ್ಟಾಂತ ಮಾತ್ರ. ಆದರೆ ಕನ್ನಡಿಯು ಮಾತ್ರ ಸ್ವಚ್ಛವಾಗಿಯೇ ಇರುತ್ತದೆ. ಬಿಂಬ ಪ್ರತಿಬಿಂಬಗಳ ಒಂದಂಶವೂ ಅದಕ್ಕೆ ಅಂಟಿರುವುದಿಲ್ಲ. ಆತ್ಮನು ಕನ್ನಡಿ ಇದ್ದಂತೆ ಸ್ವಚ್ಛನಾಗಿಯೇ ಇರುತ್ತಾನೆ. ಏಕೆಂದರೆ ಹೊರ ಜಗತ್ತು

ಒಳ ಜಗತ್ತುಗಳೆರಡೂ ಮಾಯಾ ಕಲ್ಪಿತಗಳೇ. ನಿದ್ರೆಯೂ ಮಾಯೆಯ ಮರಿ.

ನಿದ್ರೆ ಕಳೆದು ಎಚ್ಚೆತ್ತಾಗ ಕನಸಿನ ಪ್ರಪಂಚ ಇರುವುದಿಲ್ಲ. ಹಾಗೆಯೇ ಅನಾದಿ ಮಾಯೆಯಿಂದ ನಿದ್ರಿಸುತ್ತಿರುವ ಜೀವಾತ್ಮನು ಗುರೂಪದೇಶದಿಂದಲೂ ಶಾಸ್ತ್ರಾಧ್ಯಯನದಿಂದಲೂ ಈ ಮಾಯಾನಿದ್ರೆಯನ್ನು ದೂರಮಾಡಿ ಎಚ್ಚೆತ್ತಾಗ ಈ ಹೊರ ಪ್ರಪಂಚವೂ ಇರುವುದಿಲ್ಲ ! ಅಲ್ಲದೆ ಅದ್ವಿತೀಯನೂ ನಿದ್ರೆ, ಕನಸು, ಜನ್ಮ, ಮರಣಗಳಿಲ್ಲದವನೂ ಆದ ಶುದ್ಧಾತ್ಮನೇ ನಾನೆಂಬ ಜ್ಞಾನವನ್ನು ಪಡೆಯುತ್ತಾನೆ.

ಈಗೊಂದು ಶಂಕೆ ಹುಟ್ಟಬಹುದು. ಸ್ವಪ್ನವು ಕೆಲವು ನಿಮಿಷಗಳ ಕಾಲ ಇದ್ದು ಹೋಗಿಬಿಡುತ್ತದೆ. ಎಚ್ಚರವಾದೊಡನೆ ಅದೆಲ್ಲವೂ ಹುಸಿ ಎಂದು ನಮಗೆ ಗೊತ್ತಾಗುತ್ತದೆ. ಪ್ರತಿಸಲವು ಹೀಗೆ ಸ್ವಪ್ನಗಳು ನಮಗೆ ಕಾಣಿಸಿ ಹೋಗುತ್ತಿರುವುದರಿಂದ ಸ್ವಪ್ನ ಪ್ರಪಂಚವು ಮಿಥ್ಯೆಯೆಂದು ಎಲ್ಲರಿಗೂ ತಿಳಿದೇ ಇದೆ. ಆದರೆ ಜಾಗರವು ಹಾಗಲ್ಲ. ಮನುಷ್ಯನು ಬಹಳ ವರ್ಷಗಳ ಕಾಲ ಬದುಕಿರುತ್ತಾನೆ. ಜನರು ಹುಟ್ಟುವುದೂ ಸಾಯುವುದೂ ಕಾಣುತ್ತದೆ. ಪ್ರತಿಯೊಂದು ವ್ಯವಹಾರವೂ ವ್ಯವಸ್ಥಿತವಾಗಿ ನಡೆಯುತ್ತದೆ. ನಿನ್ನೆಯದು ಈ ದಿನ ಸುಳ್ಳಾಗುವುದಿಲ್ಲ. ನಾಳೆಯೂ ಇದೇ ಮುಂದುವರಿಯುತ್ತದೆ. ಜಾಗರವು ಸುಳ್ಳೆಂದು ಯಾರೂ ತಿಳಿದಿಲ್ಲ. ಆದ್ದರಿಂದಲೇ ನಾನಾ ಉದ್ಯೋಗಗಳಲ್ಲಿ ತೊಡಗುತ್ತಾರೆ. ನಾವು ಬದುಕಿರುವವರೆಗೂ ಇದು ಸುಳ್ಳಾಗದೆ ಮುಂದುವರಿಯುತ್ತಿರುವುದು ಸ್ಪಷ್ಟವಾಗಿದೆ. ಹೀಗಿರುವಾಗ ದೀರ್ಘಕಾಲದ ಜಾಗರವನ್ನು ಕೆಲವು ನಿಮಿಷಗಳ ಕಾಲ ಬಂದು ಹೋಗುವ ಸ್ವಪ್ನಕ್ಕೆ ಹೋಲಿಸಲಾದೀತೆ? ಸ್ವಪ್ನವು ಸುಳ್ಳೆಂದು ಜಾಗರದಲ್ಲಿ ಅನುಭವಕ್ಕೆ ಬರುತ್ತದೆ. ಇಂತಹ ಸ್ಥಿರವಾಗಿ ನಡೆಯುವ ಜಾಗ್ರತ್ ಪ್ರಪಂಚವನ್ನು ಕನಸಿಗೆ ಹೋಲಿಸಿ ಮಿಥ್ಯೆ ಎಂದು ಬಿಡಬಹುದೆ?

ನಿಜ; ಒಬ್ಬ ರಾಜನಿಗೆ ಸ್ವಪ್ನ ಬೀಳುತ್ತದೆ ಎನ್ನೋಣ. ಸ್ವಪ್ನದಲ್ಲಿ ಅವನು ಬಹುಕಾಲ ತನ್ನ ರಾಜ್ಯವನ್ನು ಪಾಲಿಸುತ್ತಿರುವಾಗ ಶತ್ರುಗಳು ಬಂದು ರಾಜಧಾನಿಯನ್ನು ಮುತ್ತಿದರು. ಬಹುಕಾಲ ಯುದ್ಧ ನಡೆಯಿತು. ರಾಜನು ಸೋತು ಕಾಡಿಗೆ ಓಡಿ ಹೋದನು. ಅಲ್ಲೊಬ್ಬ ಋಷಿಗಳು ಕಾಣಿಸಿದರು. ಅವರ ಉಪದೇಶದಿಂದ ಈತನು ವಿರಕ್ತನಾಗಿ ತಪಸ್ಸಿನಲ್ಲಿ ತೊಡಗಿದನು. ಹೀಗೆಯೇ ಬಹಳ ವರ್ಷ ಕಳೆಯಿತು. ಆಮೇಲೆ ಎಚ್ಚರಾಯಿತು! ಸ್ವಪ್ನವಾದದ್ದು ಕೆಲವು

ನಿಮಿಷಗಳ ಕಾಲ! ರಾಜನಿಗೆ ಕಾಣಿಸಿದ್ದು ಎಷ್ಟೋ ವರ್ಷಗಳ ಕಾಲ! ಅಂತೆಯೇ ಜೀವಾತ್ಮನ ಪರಿಸ್ಥಿತಿಯಾಗಿದೆ. ಆದ್ಯಂತವಿಲ್ಲದ ಈ ಕಾಲಚಕ್ರದಲ್ಲಿ ಮನುಷ್ಯನ ಜೀವಿತಕಾಲ ಕೆಲವು ನಿಮಿಷಗಳು ಮಾತ್ರ ಎಂದು ತಿಳಿಯಬೇಕು. ಅದನ್ನೇ ಆತನು ಎಷ್ಟೋ ವರ್ಷಗಳೆಂದು ಭ್ರಮಿಸಿದ್ದಾನೆ.

ಒಬ್ಬ ಮನುಷ್ಯನು ದೀರ್ಘವಾದ ಜೀವಿತಾವಧಿಯಲ್ಲಿ ಎಷ್ಟು ಕನಸುಗಳನ್ನು ಕಾಣುತ್ತಾನೋ, ಅವುಗಳಿಗಿಂತ ಲಕ್ಷಾಧಿಕ ಜನ್ಮಗಳನ್ನು ಆತನು ಕಳೆದು ಈಗ ಹುಟ್ಟಿರುತ್ತಾನೆ. ಜೀವಿತಗಳೆಲ್ಲವೂ ಕನಸುಗಳೇ, "ಈ ಕನಸುಗಳನ್ನು ಕಾಣುತ್ತಲೇ ಇರದೆ, ಎಲೈ ಮಾನವ, ಗುರೂಪದೇಶದಂತೆ ನಡೆದು ಪ್ರಬೋಧವನ್ನು ಪಡೆದು, ಎಲ್ಲ ಕನಸುಗಳನ್ನೂ ನಿರ್ಮೂಲ ಮಾಡಿಕೋ" ಎಂದು ವೇದಾಂತವು ಸಾರುತ್ತದೆ.

**ಬ್ರಹ್ಮಾದಿಸ್ತಂಬಪರ್ಯಂತಾ ಸ್ವಪ್ನಕಲ್ಪೈವ ಕಲ್ಪನಾ ।**
**ಸಾಕ್ಷಾತ್ ಕೃತೇಽನವಚ್ಛಿನ್ನಪ್ರಕಾಶೇ ಪರಮಾತ್ಮನಿ ॥ ವಾರ್ತಿಕ-೨೮ ॥**

ದಿಕ್ಕು ದೇಶ ಕಾಲಗಳ ಅಳತೆಗೂ ಸಿಗದ ಪ್ರಕಾಶ ಸ್ವರೂಪನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಾಗ, ಬ್ರಹ್ಮನಿಂದ ಹಿಡಿದು ಸಣ್ಣ ಸಸ್ಯದವರೆಗೂ ಇರುವ ಈ ಸೃಷ್ಟಿಯೆಲ್ಲವೂ ಕನಸಿನಂತೆ ಅವಿದ್ಯಾಕಲ್ಪಿತವೆಂದು ತಿಳಿಯುತ್ತದೆ.

ಮನುಷ್ಯನಿಗೆ ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳುಂಟಷ್ಟೇ. ಇವುಗಳಲ್ಲಿ ಸುಷುಪ್ತಿಯೆಂಬ ತನಿ ನಿದ್ರೆಯು ದೇಹಕ್ಕೂ ಮನಸ್ಸಿಗೂ ವಿಶ್ರಾಂತಿಗಾಗಿ ಬೇಕೆಂದು ಹೇಳುತ್ತಾರೆ. ಅದೂ ಪ್ರಶ್ನಾರ್ಹವೇ. ಶ್ವಾಸಕೋಶಗಳ ಉಸಿರಾಟ, ಹೃದಯದ ಮಿಡಿತ, ರಕ್ತದ ಸಂಚಾರ, ಜೀರ್ಣಾಂಗಗಳ ವ್ಯಾಪಾರ ಇವುಗಳಿಗೆ ವಿಶ್ರಾಂತಿ ಎಲ್ಲಿದೆ? ನಿದ್ರೆಯಲ್ಲಿ ಮಾಂಸಖಂಡಗಳಿಗೆ, ನರಗಳಿಗೆ, ಮನಸ್ಸಿಗೆ ವಿಶ್ರಾಂತಿಯುಂಟು, ಇರಲಿ, ಸ್ವಪ್ನದಿಂದ ದೇಹಕ್ಕೆ ಯಾವ ಪ್ರಯೋಜನ ಉಂಟು? ಆಹಾರವು ಸರಿಯಾಗಿ ಜೀರ್ಣವಾಗದಿದ್ದಾಗ, ಆಹಾರವು ಅತಿಯಾದಾಗ, ಅನಾರೋಗ್ಯವಾದಾಗ, ಅತಿಯಾದ ಚಿಂತೆಯಾದಲ್ಲಿ ಕನಸು ಬೀಳುವುದು ಸಹಜ ಎನ್ನಬಹುದು. ಅದು ಉತ್ತರವಲ್ಲ. ಯಾವ ಕಾರಣವೂ ಇಲ್ಲದೇ ಆರೋಗ್ಯವಾಗಿದ್ದಾಗಲೂ ಕನಸು

ಬೀಳುತ್ತದೆ. ಮತ್ತು ಅದರಿಂದ ದೇಹಕ್ಕೆ ಯಾವ ಪ್ರಯೋಜನ ಉಂಟು? ಸ್ವಪ್ನವಾಗದಿದ್ದರೆ ನಮಗೆ ಯಾವ ನಷ್ಟವಿದೆ? ದುಃಸ್ವಪ್ನದಿಂದ ದುಃಖವೇ ಒದಗುತ್ತದೆ. ಮನಸ್ಸಿಗೆ ವಿಶ್ರಾಂತಿಯೇ ಇರುವುದಿಲ್ಲ. ಜಾಗ್ರತ್, ಸುಷುಪ್ತಿ ಇವರೆಡೇ ಸಾಕು. ಮಧ್ಯದಲ್ಲಿ ಸ್ವಪ್ನಾವಸ್ಥೆ ಏಕೆ? ಈ ಪ್ರಶ್ನೆ ಗಹನವಾದದ್ದೇ ಸರಿ.

**ಬೀಜಸ್ಯಾಂತರಿವಾಂಕುರೋ ಜಗದಿದಂ ಪ್ರಾಙ್ ನಿರ್ವಿಕಲ್ಪಂ ಪುನಃ**
**ಮಾಯಾಕಲ್ಪಿತ ದೇಶಕಾಲಕಲನಾ ವೈಚಿತ್ರ್ಯ ಚಿತ್ರೀಕೃತಮ್ ॥**
**ಮಾಯಾವೀವ ವಿಜೃಂಭಯತ್ಯಪಿ ಮಹಾಯೋಗೀವ ಯಃಸ್ವೇಚ್ಛಯಾ**
**ತಸ್ಮೈ ಶ್ರೀ ಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥2॥**

"ಈ ಜಗತ್ತು ಮೊದಲು ಬೀಜದಲ್ಲಿರುವ ಮೊಳಕೆಯಂತೆ ನಾಮರೂಪಗಳಿಲ್ಲದೆ ನಿರ್ವಿಕಲ್ಪಕವಾಗಿರುತ್ತದೆ. ಅನಂತರ ಮಾಯೆಯಿಂದ ಕಲ್ಪಿತವಾದ ದೇಶಕಾಲ ಕ್ರಿಯಾದಿಗಳ ಸಂಬಂಧದಿಂದ ವಿಚಿತ್ರವಾಗಿ ಕಾಣುವಂತೆ ಚಿತ್ರಿತವಾಗಿರುತ್ತದೆ. ಇದನ್ನು ಯಾವಾತನು ಮಾಯಾವಿಯಂತೆ, ಮಹಾಯೋಗಿಯಂತೆ, ತನ್ನ ಇಚ್ಛಾನುಗುಣವಾಗಿ ಹೊರ ಹೊಮ್ಮಿಸಿ ಕಾಣುವಂತೆ ಮಾಡುತ್ತಾನೋ ಆ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ನಮಸ್ಕಾರ".

**ವಿವರಣೆ:** ಸೃಷ್ಟಿಗೆ ಮೊದಲು ಈ ಪ್ರಪಂಚವು ಪರಮಾತ್ಮನಲ್ಲಿಯೇ ಇರುತ್ತದೆ. ಅದು ನಿರ್ವಿಕಲ್ಪ ಸ್ಥಿತಿ. ಹೆಸರು, ಆಕಾರ, ಬಣ್ಣ – ಮುಂತಾದ ಯಾವ ವಿಕಲ್ಪಗಳೂ ಅದರಲ್ಲಿರುವುದಿಲ್ಲ. ಬೀಜದಲ್ಲಿ ಅಡಗಿರುವ ಮೊಳಕೆಯಂತೆ ಇರುತ್ತದೆ. ಹುಟ್ಟಿದ ಮೇಲೆ ಅದಕ್ಕೆ ಮೊಳಕೆ ಎಂದು ಹೆಸರು, ಆಕಾರ, ಬಣ್ಣ ಮೊದಲಾದವು ಹೊಸದಾಗಿ ಬಂದು ಬಿಡುತ್ತವೆ. ಅನಂತರ ಅದು ಗಿಡವಾಗಿ ಮರವಾಗಿ ಹೂಹಣ್ಣುಗಳಿಂದ ತುಂಬಿ ಹೋಗುತ್ತದೆ. ಇದು ವಿಕಲ್ಪ ಸ್ಥಿತಿ.

ಹಿಂದಿನ ಶ್ಲೋಕದಲ್ಲಿ **ದರ್ಪಣದೃಶ್ಯಮಾನನಗರೀತುಲ್ಯಂ** ಎಂದು ವರ್ಣಿಸಿದೆ. ಕನ್ನಡಿಯಲ್ಲಿ ಪ್ರತಿಬಿಂಬಿಸಬೇಕಾದರೆ ಬಿಂಬಕ್ಕೆ ನಾಮರೂಪಾದಿಗಳು ಇದ್ದೇ ಇರಬೇಕು. ಆದ್ದರಿಂದ ಆ ದೃಷ್ಟಾಂತವು ವ್ಯಾಕೃತವಾದ ಪ್ರಪಂಚದ ವಿಷಯವೆಂದು ತಿಳಿಯಬೇಕು. ಇಲ್ಲೊಂದು ಶಂಕೆ ಹುಟ್ಟುತ್ತದೆ. ಬೀಜದಿಂದ ಹುಟ್ಟಿದ ಮೊಳಕೆ ಗಿಡವಾಗಿ ಮರವಾಗಿ ಎಲೆ ಹೂ ಹಣ್ಣುಗಳಿಂದ ತುಂಬಿರುತ್ತದೆ. ಅವುಗಳ ನಾಮ ರೂಪ ಗುಣಗಳು ಬೇರೆ ಬೇರೆಯಾಗಿರುತ್ತವೆ. ಹಾಗಾಗಲು ಮಣ್ಣು, ನೀರು, ಬೆಳಕು, ಗಾಳಿ ಮೊದಲಾದ ಸಹಕಾರಿ ಕಾರಣಗಳು ಆವಶ್ಯಕ.

ಬೀಜದಿಂದ ಹುಟ್ಟಿದ್ದು ಬೀಜದಂತೆಯೇ ಇರುವುದಿಲ್ಲ. ಮೊಳಕೆ ಮೊದಲಾದವುಗಳ ಬೆಳೆಗೆ ಮಣ್ಣು ಮೊದಲಾದವು ಬೇಕು. ಅವೇನೂ ಬೀಜವಲ್ಲ. ಆದರೆ ಜಗತ್ತು ಹುಟ್ಟುವುದಕ್ಕೆ ಸಹಕಾರಿ ಕಾರಣ ಯಾವುದು? ಪರಮಾತ್ಮನನ್ನು ಬಿಟ್ಟು ಇನ್ನೊಂದು ವಸ್ತುವೇ ಇಲ್ಲವೆಂದು ವೇದಾಂತದ ಸಿದ್ಧಾಂತವಾಗಿದೆ. ಜಗತ್ತಾದರೋ ಪರಮಾತ್ಮನಂತಿಲ್ಲ. ಇದು ಜಡವಾದದ್ದು. ಇದರಲ್ಲಿ ರೂಪ ಕ್ರಿಯಾದಿಗಳಿವೆ. ಅಲ್ಲದೆ ಪ್ರಾಣಿಗಳೂ ಜಗತ್ತಿನಲ್ಲಿಯೇ ಸೇರುತ್ತವೆ. ಈ ಪ್ರಾಣಿಗಳಲ್ಲಿ ಚೈತನ್ಯವಿದೆ. ಚೈತನ್ಯ ಸ್ವರೂಪನಾದವನು ಪರಮಾತ್ಮನೊಬ್ಬನೇ. ಆತನೇ ನಾನಾ ಜೀವಗಳ ರೂಪವನ್ನು ತಳೆದಿದ್ದಾನೆ ಎಂದು ಹೇಳಲಾಗುವುದಿಲ್ಲ. ಜೀವರು ನಾನಾ ವಿಧವಾದ ಕಷ್ಟಗಳನ್ನು ಅನುಭವಿಸುತ್ತಾ ಸಂಸಾರದಲ್ಲಿ ತೊಳಲುತ್ತಿದ್ದಾರೆ. ಪರಮಾತ್ಮನಿಗೆ ಯಾವ ಸಂಸಾರ ಬಂಧನವೂ ಇಲ್ಲ. ಹೀಗಿರುವಾಗ ಪರಮಾತ್ಮನಿಂದ ಈ ಜಗತ್ತು ಹೊರ ಹೊಮ್ಮಿತು ಎಂಬ ಮಾತು ಹೇಗೆ ಹೊಂದುತ್ತದೆ? ಪರಮಾತ್ಮನು ಈ ಜಗತ್ತಿಗೆ ಉಪಾದಾನ ಕಾರಣವೆಂದು ವೇದಾಂತವು ಹೇಳುತ್ತದೆ. ಮಣ್ಣು ಅದರಿಂದಾಗುವ ಗಡಿಗೆ ಮಡಕೆ ಹಣತೆ ಹರವಿಗಳಿಗೆ ಉಪಾದಾನ ಕಾರಣ. ಗಡಿಗೆ ಮೊದಲಾದವು ಎಲ್ಲವೂ ಮಣ್ಣಿನ ವಿಕಾರಗಳೇ ಆಗಿರುತ್ತವೆ. ಅವುಗಳೆಲ್ಲವೂ ಬರಿಯ ಮಣ್ಣು ಎಂದು ಹೇಳಬಹುದು. ಚಿನ್ನವು ಬಗೆ ಬಗೆಯ ಒಡವೆಗಳಿಗೆ ಉಪಾದಾನ ಕಾರಣ. ಪರೀಕ್ಷಿಸಿದರೆ ಎಲ್ಲ ಒಡವೆಗಳೂ ಚಿನ್ನವೇ ಆಗಿರುತ್ತವೆ. ಹೀಗಿರುವಾಗ ಪರಮಾತ್ಮನಿಂದ ಈ ಜಗತ್ತು ಹುಟ್ಟಿತೆಂದು ಹೇಗೆ ಹೇಳಬಹುದು? ಆತನ ಯಾವ ಅಂಶವೂ ಈ ಜಗತ್ತಿನಲ್ಲಿ ಕಾಣುವುದಿಲ್ಲವಲ್ಲ. ಪ್ರಾಣಿಗಳಲ್ಲಿ ಚೈತನ್ಯಾಂಶವು ಇದ್ದರೂ ಸಂಸಾರದ ಕ್ಲೇಶಗಳನ್ನು ಅನುಭವಿಸುವುದರಿಂದ ಪರಮಾತ್ಮನಿಗಿಂತ ಜೀವನು ಭಿನ್ನನೇ ಸರಿ ಎನ್ನಬೇಕಾಗುತ್ತದೆಯಲ್ಲವೆ?

ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ಶ್ಲೋಕದ ಮೂರನೆಯ ಪಾದದಲ್ಲಿ ಮಾಯಾವಿ, ಮಹಾಯೋಗಿ ಎಂಬ ಎರಡು ಉಪಮಾನಗಳನ್ನು ಹೇಳಿದ್ದಾರೆ. ಮಾಯಾವಿಯೆಂದರೆ ಕೈಚಳಕದಿಂದಲೂ ಯಾಂತ್ರಿಕ ಸಾಧನಗಳಿಂದಲೂ ಪ್ರೇಕ್ಷಕರಿಗೆ ಚಮತ್ಕಾರಗಳನ್ನು ತೋರಿಸುವ ಈಗಿನ ಇಂದ್ರಜಾಲಿಕ (Magician) ನಲ್ಲ, ತಂತ್ರಶಾಸ್ತ್ರದ ಪ್ರಕಾರ ಸಾಧನೆಗಳನ್ನು ಮಾಡಿ ಸಿದ್ಧಿಯನ್ನು ಗಳಿಸಿಕೊಂಡಿರುವ ಮಾಂತ್ರಿಕನನ್ನು ಇಲ್ಲಿ ಮಾಯಾವಿಯೆಂದು ಗ್ರಹಿಸಬೇಕು. ಈ ಬಗೆಯ ಇಂದ್ರಜಾಲಿಕರು ಇದ್ದರೆಂಬುದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತಾರೆ. ಈ ಮಾಯಾವಿಯು ಪ್ರೇಕ್ಷಕರೆದುರಿಗೆ

ಬರಿಗೈಯನ್ನು ಬೀಸುತ್ತಾನೆ. ಅವನ ಕೈಯಿಂದ ಒಂದು ಹಗ್ಗದ ಸುರುಳಿ ಹೊರಹೊಮ್ಮಿ ನೆಲದ ಮೇಲೆ ಬೀಳುತ್ತದೆ. ಒಡನೆಯೇ ಅದು ಬಿಚ್ಚಿಕೊಂಡು ಕಂಬದಂತೆ ಎದ್ದು ನೆಟ್ಟಗೆ ನಿಲ್ಲುತ್ತದೆ. ಮಾಯಾವಿಯು ಅದನ್ನು ಹತ್ತಿ ತುದಿಯವರೆಗೆ ಹೋಗುತ್ತಾನೆ. ಅಲ್ಲಿ ಭಾರಿ ಹೊಡೆದಾಟವಾದಂತೆ ಗದ್ದಲವಾಗುತ್ತದೆ. ಕತ್ತಿಗಳು ಠಣ್ ಠಣ್ ಎಂದು ಶಬ್ದ ಮಾಡುತ್ತವೆ. ಮಾಯಾವಿಯ ಕೈ ಕಾಲುಗಳು, ತಲೆಯೂ ಕತ್ತರಿಸಿ ತುಂಡಾಗಿ ನೆಲದ ಮೇಲೆ ಬೀಳುತ್ತದೆ. ರಕ್ತದ ಕೋಡಿ ಹರಿಯುತ್ತದೆ. ಇವೆಲ್ಲವನ್ನೂ ನೋಡುತ್ತಿರುವ ಪ್ರೇಕ್ಷಕರು ಮಾಯಾವಿಯು ಸತ್ತು ಹೋದನೆಂದು ಭ್ರಮಿಸುತ್ತಾರೆ. ಸ್ವಲ್ಪ ಹೊತ್ತಿನಲ್ಲಿ ಮಾಯಾವಿಯು ನಗುತ್ತಾ ಎದುರಿಗೆ ನಿಂತಿರುತ್ತಾನೆ ! ಕತ್ತರಿಸಿ ಬಿದ್ದ ಕೈಕಾಲುಗಳೂ ಇರುವುದಿಲ್ಲ. ತಲೆಯೂ ಬಿದ್ದಿರುವುದಿಲ್ಲ. ರಕ್ತದ ಕೋಡಿಯೂ ಇಲ್ಲ ಹಗ್ಗದ ಕಂಬವೂ ಇಲ್ಲ! ಇದು ಆ ಮಾಯಾವಿಯ ಇಂದ್ರಜಾಲ. ಹಾಗೆ ಪರಮಾತ್ಮನ ಮಾಯಾಶಕ್ತಿಯಿಂದ ಈ ಜಗತ್ತು ನಿರ್ಮಿತವಾಗಿದೆ. ಆತನು ಶಾಂತನಾಗಿ ಸ್ವಸ್ಥನಾಗಿರುತ್ತಾನೆ ಎಂದು ಅಭಿಪ್ರಾಯ. ಈ ಹಗ್ಗದ ದೃಷ್ಟಾಂತವನ್ನು ಶ್ರೀ ಶಂಕರಾಚಾರ್ಯರು ಸೂತ್ರಭಾಷ್ಯದಲ್ಲಿಯೂ ಬರೆದಿದ್ದಾರೆ.

ಕೆಲವು ವರ್ಷಗಳ ಹಿಂದೆ ಇದೇ ಬಗೆಯ ಇಂದ್ರಜಾಲವನ್ನು ಒಬ್ಬ ಭಾರತೀಯನು ಲಂಡನ್ನಿನಲ್ಲಿ ಮಾಡಿದನೆಂದೂ ಅದನ್ನು ತಾನು ಪ್ರತ್ಯಕ್ಷವಾಗಿ ನೋಡಿದೆನೆಂದೂ ಒಬ್ಬ ಪಾಶ್ಚಾತ್ಯನು ತನ್ನ ಗ್ರಂಥದಲ್ಲಿ ಬರೆದಿದ್ದುದನ್ನು ನಾನು ಓದಿದ್ದೇನೆ. ಅದಕ್ಕೆ Rope Trick ಎಂದು ಹೆಸರಿಟ್ಟಿದ್ದನು. ಯಾವ ಗ್ರಂಥದಲ್ಲಿ ಬರೆದಿದ್ದನೆಂಬುದು ಈಗ ನನ್ನ ಸ್ಮರಣೆಯಲ್ಲಿಲ್ಲ. ನಮ್ಮ ಪತ್ರಿಕೆಗಳಲ್ಲಿಯೂ ಈ ಸುದ್ದಿ ಪ್ರಕಟವಾಗಿತ್ತು.

ರಾಕ್ಷಸರು ಮಾಯಾವಿಗಳಾಗಿದ್ದರಿಂದ ಇಂತಹ ಅದ್ಭುತಗಳನ್ನು ಎಸಗುತ್ತಿದ್ದರೆಂಬುದು ರಾಮಾಯಣಾದಿ ಗ್ರಂಥಗಳಲ್ಲಿದೆ. ಮಾರೀಚನು ಚಿನ್ನದ ಜಿಂಕೆಯಾದದ್ದು, ಇಂದ್ರಜಿತುವಿನ ಮಾಯಾಯುದ್ಧ, ಆತನು ಮಾಯಾ ಸೀತೆಯನ್ನು ರಣರಂಗಕ್ಕೆ ತಂದು ಕೊಂದು ಹಾಕಿದುದು – ಮೊದಲಾದವು ಮಾಯಾ ವಿಜೃಂಭಣೆಗಳು. ಇನ್ನು ಯೋಗಸಿದ್ಧಿಯನ್ನು ಪಡೆದ ಯೋಗಿಯೂ ಆಶ್ಚರ್ಯಕರವಾದ ಕಾರ್ಯಗಳನ್ನು ಯೋಗಬಲದಿಂದ ಮಾಡಬಲ್ಲನೆಂದು ಪಾತಂಜಲ ಯೋಗ ಶಾಸ್ತ್ರದಲ್ಲಿ ಹೇಳಿದೆ.

ವಿಶ್ವಾಮಿತ್ರನು ತಪೋಬಲದಿಂದಲೇ ಯಾವ ಉಪಕರಣವೂ ಇಲ್ಲದೆ ಗ್ರಹನಕ್ಷತ್ರಾದಿಗಳನ್ನು ಸೃಷ್ಟಿಸಿದನು. ಸೌಭರಿಯೆಂಬ ಋಷಿಯು ದಿವ್ಯಸುಂದರ ಪುರುಷನ ರೂಪವನ್ನು ಧರಿಸಿ ತಪೋಬಲದಿಂದಲೇ ಉತ್ತಮ ಭವನಗಳನ್ನು ಸುಖಭೋಗ ಸಾಮಗ್ರಿಗಳನ್ನು ನಿರ್ಮಿಸಿದನು.

ಅಚಿಂತ್ಯವಾದ ಮಾಯಾಶಕ್ತಿಯ ಪ್ರಭಾವವನ್ನು ಶ್ರೀ ವಿದ್ಯಾರಣ್ಯ ಸ್ವಾಮಿಗಳು ಪಂಚದಶಿಯ ಚಿತ್ರದೀಪ ಪ್ರಕರಣದಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾರೆ. ಈ ವಿಷಯವಾಗಿ ಪ್ರಾಚೀನರು ಹೇಳಿರುವ ಒಂದು ಶ್ಲೋಕವನ್ನು ಉದಾಹರಿಸಿದ್ದಾರೆ.

**ಏತಸ್ಮಾತ್ ಕಿಮಿವೇಂದ್ರಜಾಲಮಪರಂ ಯದ್ ಗರ್ಭವಾಸೇ ಸ್ಥಿತಂ**
**ರೇತಶ್ಚೇತತಿ ಹಸ್ತಮಸ್ತಕ ಪದಪ್ರೋದ್ಭೂತನಾನಾಂಕುರಮ್ ।**
**ಪರ್ಯಾಯೇಣ ಶಿಶುತ್ವಯೌವನ-ಜರಾ-ವೇಷೈರನೇಕೈರ್ವೃತಂ**
**ಪಶ್ಯತ್ಯತ್ತಿ ಶೃಣೋತಿ ಜಿಘ್ರತಿ ತಥಾ ಗಚ್ಛತ್ಯಥಾಗಚ್ಛತಿ ॥**

"ಈ ಜಗತ್ತಿನಲ್ಲಿ ಇದಕ್ಕಿಂತ ಅದ್ಭುತವಾದ ಯಾವ ಇಂದ್ರಜಾಲವಿದ್ದೀತು? ಏನೆಂದರೆ, ಗರ್ಭದಲ್ಲಿರುವ ಒಂದು ವೀರ್ಯಬಿಂದುವಿಗೆ ಕ್ರಮವಾಗಿ ಚೈತನ್ಯ ಬಂದು ಚಲಿಸುತ್ತದೆ. ಕೈಗಳೂ ತಲೆಯೂ ಕಾಲುಗಳೂ ಹುಟ್ಟುತ್ತವೆ. ಕೈ ಕಾಲುಗಳಿಗೆ ಬೆರಳುಗಳೂ ತಲೆಗೆ ಕಿವಿ ಮೂಗು ಬಾಯಿ ಮುಂತಾದವೂ ಅಂಕುರಗಳಂತೆ ಹುಟ್ಟಿಕೊಳ್ಳುತ್ತವೆ. ಕಾಲಕ್ರಮದಲ್ಲಿ ಆ ವೀರ್ಯಬಿಂದುವೇ ಶಿಶುವಾಗಿ ಹುಟ್ಟಿ ಯೌವನ ಮುಪ್ಪು ಮುಂತಾದ ನಾನಾ ವೇಷಗಳನ್ನು ಧರಿಸುತ್ತದೆ. ಅಲ್ಲದೇ ಅದು ತಿನ್ನುತ್ತದೆ, ಶಬ್ದವನ್ನು ಕೇಳುತ್ತದೆ, ವಾಸನೆಯನ್ನು ಗ್ರಹಿಸಬಲ್ಲದು. ಅಂತೆಯೇ ಮುಂದೆ ಹೋಗಬಲ್ಲದು, ಹಿಂದಕ್ಕೆ ಬರಬಲ್ಲದು."

ಈ ಮನುಷ್ಯದೇಹವು ಯಾವ ವಿಜ್ಞಾನಿಯೂ ರಚಿಸಲಾರದ ಮಹಾಯಂತ್ರ. ಹೃದಯ, ಮಿದುಳು, ಇಂದ್ರಿಯಗಳು, ಜಠರ ಇವು ನಡೆಸುವ ಕಾರ್ಯಗಳು ಹೇಗೆಂಬುದು ನಮ್ಮ ಊಹೆಗೂ ನಿಲುಕುವುದಿಲ್ಲ. ಈ ಶಕ್ತಿ ಸಾಮರ್ಥ್ಯಗಳು ಅವುಗಳಿಗೆ ಹೇಗೆ ಬಂದವು? ಅವೆಲ್ಲವೂ ಆಯಾ ವಸ್ತುಗಳ ಪ್ರಕೃತಿ ಎನ್ನುವುದು ಉತ್ತರವಲ್ಲ. ಗೊತ್ತಿಲ್ಲ ಎಂಬ ಮಾತಿನ ಪರ್ಯಾಯ ಅದು.

ವೇದಾಂತವು ಮಾಯಾ ಶಕ್ತಿಯನ್ನು ತಂದೊಡ್ಡಿರುವುದು ಮೂಢ

ನಂಬಿಕೆಯಿಂದಲ್ಲ. ಈಚೆಗೆ ವಿಜ್ಞಾನಿಗಳೂ ಮಾಯೆಗೆ ಶರಣಾಗಿದ್ದಾರೆ. ಕುತೂಹಲಿಗಳು ಡಾ. ಎನ್.ಸಿ. ಪಂಡ ಎಂಬುವವರು ಬರೆದಿರುವ Maya in Physics ಎಂಬ ಪ್ರಬಂಧವನ್ನು ನೋಡಬಹುದು. (ಮೋತಿಲಾಲ್ ಬನಾರಸೀದಾಸ್ ಪ್ರಕಾಶಿತ) ಆ ಗ್ರಂಥದ ಒಂದು ವಾಕ್ಯವನ್ನಿಲ್ಲಿ ಉದಾಹರಿಸಿದೆ Adwaita Vedanta is more scientific than science itself. Page 376 (ಅದ್ವೈತ ವೇದಾಂತವು ವಿಜ್ಞಾನಕ್ಕಿಂತ ಹೆಚ್ಚು ವೈಜ್ಞಾನಿಕವಾಗಿದೆ.)

ಶ್ಲೋಕದಲ್ಲಿ **ಸ್ವೇಚ್ಛಯಾ** ಎಂಬ ಪದವಿದೆ. ಪರಮಾತ್ಮನು ತನ್ನ ಇಚ್ಛಾನುಗುಣವಾಗಿ ಜಗತ್ತನ್ನು ಸೃಷ್ಟಿಸುತ್ತಾನೆ. ಜ್ಞಾನ, ಇಚ್ಛೆ, ಕ್ರಿಯೆ ಎಂಬಿವು ಕ್ರಮವಾಗಿ ಇರತಕ್ಕವು. ಮೊದಲು ವಸ್ತುಜ್ಞಾನ, ಅನಂತರ ಅದನ್ನು ಮಾಡಬೇಕು ಅಥವಾ ಪಡೆಯಬೇಕು ಎಂಬ ಇಚ್ಛೆ. ಆಮೇಲೆ ಕ್ರಿಯೆ ನಡೆಯುತ್ತದೆ. ಇದು ಸರ್ವಾನುಭವ ಸಿದ್ಧವಾದದ್ದು. ಮನುಷ್ಯನಲ್ಲಿ ಜಡವಾದ ಅಂತಃಕರಣವಿರುವುದರಿಂದ ಅದರಲ್ಲಿ ಜ್ಞಾನೇಚ್ಛೆಗಳೆಂಬ ವೃತ್ತಿಗಳು ಹುಟ್ಟಬಹುದು. ಪರಮಾತ್ಮನಲ್ಲಿ ಜಡವಾದ ಅಂತಃಕರಣವಿಲ್ಲ. ಇದ್ದರೆ ಅವನು ಅದ್ವಿತೀಯನಾಗುವುದಿಲ್ಲ. ಮತ್ತು ಜ್ಞಾನವು ಅವನಲ್ಲಿ ಹುಟ್ಟುತ್ತದೆಯೆಂದಾದರೆ ಮೊದಲು ಜ್ಞಾನವಿರಲಿಲ್ಲವೆಂದು ಹೇಳಬೇಕಾದೀತು. ಆತನು ನಿತ್ಯಚೈತನ್ಯ ಸ್ವರೂಪನಾದ್ದರಿಂದ ಜ್ಞಾನದ ಉತ್ಪತ್ತಿಯೆಂಬುದು ಆತನಲ್ಲಿ ಅಸಂಗತವಾಗುತ್ತದೆ. **ಶ್ರುತಿಯಲ್ಲಿಯೂ ಸೋಽಕಾಮಯತ। ಬಹು ಸ್ಯಾಂ ಪ್ರಜಾಯೇಯೇತಿ। ಇದಂ ಸರ್ವಮಸೃಜತ** (ತೈ 2–6) ಎಂದಿದೆ. **ಅಕಾಮಯತ** = ಇಚ್ಛಿಸಿದನು. **ಅಸೃಜತ** = ಸೃಷ್ಟಿ ಮಾಡಿದನು. ಆದ್ದರಿಂದ ಜ್ಞಾನೇಚ್ಛೆಗಳು ಭಗವಂತನಲ್ಲಿ ಹೊಸದಾಗಿ ಹುಟ್ಟತಕ್ಕವಲ್ಲ. ಅವು ಆತನ ಸ್ವರೂಪಗಳೇ ಆಗಿಬಿಟ್ಟವೆ. ಇಲ್ಲಿ ಕ್ರಿಯೆಯೆಂದರೆ ಚಲನಾತ್ಮಕವಾದ ಕ್ರಿಯೆಯಲ್ಲ. ಪರಬ್ರಹ್ಮವು ನಿಷ್ಕ್ರಿಯ. ಚಲಿಸುವುದೇ ಇಲ್ಲ. ಸ್ವಸ್ವರೂಪವಾದ ಇಚ್ಛೆಯಿಂದಲೇ ಮಾಯೆಯು ಕ್ರಿಯೆಯನ್ನು ನಡೆಸಿಬಿಡುತ್ತದೆ. **ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ** ಎಂದು ಪ್ರಾಚೀನ ವಚನವಿದೆ. ಆದ್ದರಿಂದ ಕ್ರಿಯೆಯೂ ಆತನ ಸ್ವರೂಪವೆಂದುಬಿಡಬಹುದು. **ಸತ್ಯಂ ಜ್ಞಾನಮನಂತಂ ಬ್ರಹ್ಮ** ಎಂದು ಶ್ರುತಿಯು ಪರಮಾತ್ಮನನ್ನು ಜ್ಞಾನಸ್ವರೂಪನೆಂದೇ ವರ್ಣಿಸಿದೆ. ಅದು ಇಚ್ಛಾಕ್ರಿಯೆಗಳಿಗೂ ಉಪಲಕ್ಷಣವೆಂದು ತಿಳಿಯಬಹುದು. ಪ್ರಕಾಶವು ಸೂರ್ಯನ ಸ್ವರೂಪವೇ ಆಗಿದೆ. ಸೂರ್ಯನು ತನ್ನ ಪಾಡಿಗೆ ಇದ್ದರೂ "ಸೂರ್ಯನು ತನ್ನ ಪ್ರಕಾಶದಿಂದ ಲೋಕವನ್ನು ಬೆಳಗುತ್ತಾನೆ" ಎನ್ನುವಂತೆ ಇದೆ. ಸುಡುವ ಶಕ್ತಿ ಸ್ವರೂಪವೇ ಬೆಂಕಿ. ಆದರೂ ಬೆಂಕಿ ಹುಲ್ಲನ್ನು ಸುಡುತ್ತದೆ ಎಂದು ಬೆಂಕಿಯಲ್ಲಿ

ಕ್ರಿಯೆಯನ್ನು ಹೇಳುತ್ತೇವೆ. ಹೀಗೆ ಲೋಕ ವ್ಯವಹಾರವು ಅನೇಕ ವಿಧವಾಗಿದ್ದು ಬಿಡುತ್ತದೆ. ಪರಮಾರ್ಥವಾದ ಸತ್ಯವು ಬೇರೆ ವಿಧವಾಗಿರುತ್ತದೆ. ಪರಮಾತ್ಮನಾದ ಶ್ರೀ ದಕ್ಷಿಣಾಮೂರ್ತಿಗೆ ನಮಸ್ಕಾರ.

**ಯಸ್ಯೈವ ಸ್ಫುರಣಂ ಸದಾತ್ಮಕಮಸತ್ಕಲ್ಪಾರ್ಥಗಂ ಭಾಸತೇ**
**ಸಾಕ್ಷಾತ್ತತ್ತ್ವಮಸೀತಿ ವೇದವಚಸಾ ಯೋ ಬೋಧಯತ್ಯಾಶ್ರಿತಾನ್।**
**ಯತ್ ಸಾಕ್ಷಾತ್ಕರಣಾದ್ಭವೇನ್ನ ಪುನರಾವೃತ್ತಿರ್ಭವಾಂಭೋನಿಧೌ**
**ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥೩॥**

"ಯಾವಾತನ ಸದ್ರೂಪವಾದ ಪ್ರಕಾಶವು ಅಸದ್ರೂಪವೋ ಎಂಬಂತಿರುವ ವಿಷಯವನ್ನು ಸೇರಿ ಬೆಳಗುತ್ತದೆಯೋ, ಯಾವಾತನು ಆಶ್ರಿತರಾದ ಶಿಷ್ಯರಿಗೆ 'ಅಯ್ಯಾ ಆ ಬ್ರಹ್ಮವಸ್ತುವೇ ನಿಜವಾಗಿ ನೀನಾಗಿದ್ದೀಯೇ' ಎಂದು ಬೋಧಿಸುತ್ತಾನೋ, ಯಾವಾತನ ಸಾಕ್ಷಾತ್ಕಾರದಿಂದ ಈ ಸಂಸಾರಸಾಗರದಲ್ಲಿ ಪ್ರವೇಶವಿಲ್ಲವೋ ಅಂತಹ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ, ಇದೋ ಈ ನಮಸ್ಕಾರ.

ಜಗತ್ತಿನಲ್ಲಿರುವ ಘಟಪಟಾದಿ ವಸ್ತುಗಳೆಲ್ಲವೂ ಮಾಯಾಕಲ್ಪಿತವಾದವೆಂದೂ ಅವು ಪರಮಾರ್ಥವಾಗಿ ಇಲ್ಲವೆಂದೂ ವೇದಾಂತವು ಸಾರುತ್ತದೆಯಷ್ಟೆ. ಹಾಗಾದರೆ ಅವು ಇವೆಯೆಂದು ನಮಗೆ ಪ್ರತೀತವಾಗುವುದು ಹೇಗೆ? ಘಟಪಟಾದಿಗಳಲ್ಲಿ ಸತ್ತಾ (ಇರುವಿಕೆ) ಎಂಬುದು ತಾತ್ಕಾಲಿಕವಾಗಿಯಾದರೂ ಹೇಗೆ ಬಂದಿತು? ಅದು ಇದೆಯೆಂದು ಪ್ರಕಾಶಿಸುವುದಾದರೂ ಹೇಗೆ? ಕನ್ನಡಿಯಲ್ಲಿ ತೋರುವ ಪ್ರತಿಬಿಂಬದ ಸತ್ತಾ ಪ್ರಕಾಶ ಇವೆರಡೂ ಬಿಂಬದಲ್ಲಿದ್ದವೇ ಸರಿ. ಹಾಗೆ ಘಟಪಟಾದಿಗಳಿಗೆ ಬಿಂಬವು ಯಾವುದು? ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಪರಮಾತ್ಮನಾದ ಶ್ರೀ ದಕ್ಷಿಣಾಮೂರ್ತಿಯೇ ಬಿಂಬ. ಆತನಲ್ಲಿರುವ ಸತ್ತಾಪ್ರಕಾಶಗಳು ಘಟಪಟಾದಿಗಳೆಂಬ ಪ್ರತಿಬಿಂಬದಲ್ಲಿ ಕಾಣಿಸಿಕೊಳ್ಳುತ್ತವೆ ಎಂದು ಉತ್ತರ. ಇದು ಕೇವಲ ದೃಷ್ಟಾಂತ. ಪರಮಾತ್ಮನು ಘಟಪಟಾದಿಗಳಂತೆ ಇಲ್ಲ. ಸತ್ತಾ ಪ್ರಕಾಶ ಇವೆರಡು ಮಾತ್ರ ಆತನವು. ಪರಮಾತ್ಮನ ಅಸ್ತಿತ್ವವೇ ಜಗತ್ತಿನ ಅಸ್ತಿತ್ವ, ಆತನ ಪ್ರಕಾಶವೇ ಜಗತ್ತಿನ ಪ್ರಕಾಶ. ನೀರಿನ ಅಲೆಗಳೂ ಗುಳ್ಳೆಗಳೂ ನೀರಿಗಿಂತ ಬೇರೆಯಾಗಿ ಇಲ್ಲ. ನೀರಿನಲ್ಲಿಯೇ ಅವು ಇರುತ್ತವೆ. ನೀರಿಲ್ಲದೆ ಅವುಗಳಿಗೆ ಅಸ್ತಿತ್ವವೇ ಇಲ್ಲ.

ಘಟವು ತನಗೆ ಉಪಾದಾನ ಕಾರಣವಾದ ಮಣ್ಣಿನಲ್ಲಿ ಸೇರಿಕೊಳ್ಳುತ್ತದೆ. ಹಾಗೆಯೇ ಇತರ ವಸ್ತುಗಳೂ ತಮ್ಮ ಕಾರಣಗಳಲ್ಲಿ ಅಡಗುತ್ತವೆ. ಹಾಗೆಯೇ ಮಣ್ಣು ಮೊದಲಾದವು ತಮಗೆ ಮೂಲ ಕಾರಣವಾದ ಪ್ರಕಾಶದಲ್ಲಿ ಎಂದರೆ ಪರಮೇಶ್ವರನಲ್ಲಿ ಅಡಗುತ್ತವೆ ಎಂದು ಸಿದ್ಧವಾಗುತ್ತದೆ. ಈಗ ಏನು ಹೇಳಿದ ಹಾಗಾಯಿತು? ಸಮಸ್ತ ವಿಶ್ವವೂ ಪರಮೇಶ್ವರನಲ್ಲಿಯೇ ಅಡಗಿದೆ. ಹೊರಗೆ ಕಾಣುತ್ತಿರುವುದು ಕೇವಲ ಪ್ರತಿಬಿಂಬ ಎಂದು ಹೇಳಿದಂತಾಯಿತು. ಪ್ರತಿಬಿಂಬವು ಕಾಣಬೇಕಿದ್ದರೆ ನಡುವೆ ಕನ್ನಡಿ ಇರಬೇಕಷ್ಟೆ, ವಿಶ್ವವೆಂಬ ಪ್ರತಿಬಿಂಬವು ಕಾಣಲು ಕನ್ನಡಿ ಯಾವುದು? ನಮ್ಮ ಅಂತಃಕರಣವೃತ್ತಿಯಾದ ಜ್ಞಾನವೇ ಕನ್ನಡಿ. ಕನ್ನಡಿಯೇ ಮಲಿನವಾಗಿದ್ದರೆ ಪ್ರತಿಬಿಂಬವೂ ಮಲಿನವಾಗಿಯೇ ಕಾಣುವುದಲ್ಲವೆ? ಹಾಗೆ ಅಜ್ಞಾನವೆಂಬ ಕೊಳೆಯು ಈ ಕನ್ನಡಿಗೆ ಮುತ್ತಿಕೊಂಡಿರುವುದರಿಂದ ಬಿಂಬದಲ್ಲಿಲ್ಲದ ನಾಮರೂಪಗಳು ಪ್ರತಿಬಿಂಬದಲ್ಲಿ ತೋರುತ್ತವೆ. ಇದನ್ನೇ ಮೊದಲನೆಯ ಶ್ಲೋಕದಲ್ಲಿ **ವಿಶ್ವಂ ದರ್ಪಣದೃಶ್ಯಮಾನನಗರೀತುಲ್ಯಂ** ಎಂದು ವರ್ಣಿಸಲಾಗಿದೆ. ಭಗವದ್ಗೀತೆಯಲ್ಲಿ –**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ** ಎಂದು ಶ್ರೀಕೃಷ್ಣನು ಹೇಳಿರುವುದು ಈ ವಿಷಯವನ್ನು ಎಂದು ತಿಳಿಯಬೇಕು.

ಪ್ರಕೃತ ಶ್ಲೋಕದಲ್ಲಿ **ಸಾಕ್ಷಾತ್ ತತ್ತ್ವಮಸೀತಿ ವೇದವಚಸಾ** ಎಂಬ ವಚನಕ್ಕೆ ಇದಿಷ್ಟು ಪೀಠಿಕೆಯಾಗಿದೆ. ಸಕಲ ಜೀವರೂ **ನಾನು ಬೇರೆ, ನೀನು ಬೇರೆ, ಪರಮಾತ್ಮನು ಬೇರೆ, ಜಗತ್ತು ಬೇರೆ** ಎಂದು ತಿಳಿದುಕೊಂಡೇ ವ್ಯವಹಾರವನ್ನು ಸಾಗಿಸುತ್ತಿದ್ದಾರೆ. ಈ ದ್ವೈತಬುದ್ಧಿಯು ತೊಲಗಿದ ಹೊರತು ಸತ್ಯದ ಜ್ಞಾನವಾಗುವುದೇ ಇಲ್ಲ. ದ್ವೈತಬುದ್ಧಿಯನ್ನು ತೊಲಗಿಸುವ ಮಹಾವಾಕ್ಯ **ತತ್ತ್ವಮಸಿ.** ಈ ವಾಕ್ಯವು ಛಾಂದೋಗ್ಯೋಪನಿಷತ್ತಿನಲ್ಲಿದೆ. ೬ನೇ ಪ್ರಪಾಠಕದ ಅಷ್ಟಮಖಂಡದಿಂದ ಮುಂದೆ **ಒಂಬತ್ತು** ಸಲ ಬಂದಿದೆ. ಇದರಿಂದಲೇ ಈ ವಾಕ್ಯದ ಪ್ರಾಧಾನ್ಯವು ಎದ್ದುಕಾಣುತ್ತದೆ. ಜೀವಾತ್ಮ ಪರಮಾತ್ಮರಿಗೆ ವಾಸ್ತವವಾದ ಭೇದವಿಲ್ಲವೆಂದೂ ಪರಮಾತ್ಮನೇ ಜೀವಾತ್ಮನಾಗಿ ತೋರುತ್ತಾನೆಂದೂ ಈ ಮಹಾವಾಕ್ಯವು ತಿಳಿಸುತ್ತದೆ. ಹೇಗೆಂದರೆ :

ಆಕಾಶವಿರುವುದು ಒಂದೇ ಎಂದು ಎಲ್ಲರಿಗೂ ತಿಳಿದಿದೆ. ಗಡಿಗೆಯೊಳಗೆ ಇರುವ ಆಕಾಶವನ್ನು ಘಟಾಕಾಶ ಎನ್ನುತ್ತೇವೆ. ಮಠದೊಳಗೆ ಇರುವ ಆಕಾಶವನ್ನು ಮಠಾಕಾಶ ಎನ್ನುತ್ತೇವೆ. ಆಕಾಶ ಒಂದೇ ಆದರೂ ಘಟ,

ಮಠ ಎಂಬ–ಉಪಾಧಿಗಳು ಸಂಬಂಧಿಸಿದ್ದರಿಂದ ಎರಡು ಆಕಾಶಗಳಾದವು. ಹೀಗೆ ಎಷ್ಟು ಉಪಾಧಿಗಳಿರುತ್ತವೆಯೋ ಅಷ್ಟು ಆಕಾಶಗಳಾಗುತ್ತವೆ. ಒಂದೇ ಆಕಾಶದಲ್ಲಿ ಘಟಾಕಾಶ, ಮಠಾಕಾಶ ಮುಂತಾದವು ಕಲ್ಪಿತವಾದವು. ಉಪಾಧಿ ಎಂದರೆ ಒಂದು ಬಗೆಯ ವಿಶೇಷಣ. ಎಂದರೆ ವಿಶೇಷ್ಯವನ್ನು ಬೇರ್ಪಡಿಸುವ ಪದಾರ್ಥ. ವಿಶೇಷಣವಾದರೆ ಅದಕ್ಕೆ ಕ್ರಿಯೆಯಲ್ಲಿ ಅನ್ವಯವಿರುತ್ತದೆ. ಉಪಾಧಿಯೆಂದರೆ ಅದಕ್ಕೆ ಕ್ರಿಯೆಯಲ್ಲಿ ಅನ್ವಯವಿರುವುದಿಲ್ಲ. ಉದಾಹರಣೆಗೆ, ಬಿಳಿಯ ಹಸು ಹೋಗುತ್ತದೆ. ಬಿಳಿಯ ಎಂಬುದು ವಿಶೇಷಣ. ಹೋಗುವ ಕ್ರಿಯೆಯಲ್ಲಿ ಹಸುವಿಗೆ ಅನ್ವಯವಿರುವಂತೆ ಬಿಳುಪಿಗೂ ಅನ್ವಯವಿದೆ. ಚೈತ್ರನ ಹಸು ಹೋಗುತ್ತದೆ. ಇಲ್ಲಿ ಚೈತ್ರನು ಉಪಾಧಿ. ಹೋಗುವ ಕ್ರಿಯೆಯಲ್ಲಿ ಚೈತ್ರನಿಗೆ ಅನ್ವಯವಿಲ್ಲ, ವಿಶೇಷಣಕ್ಕೂ ಉಪಾಧಿಗೂ ಈ ಬಗೆಯ ಸೂಕ್ಷ್ಮವಾದ ಭೇದ ಉಂಟು.

ಅದಿರಲಿ; ಘಟ, ಮಠ – ಮುಂತಾದ ಉಪಾಧಿಗಳಿಂದ ಆಕಾಶದಲ್ಲಿ ತೋರುವ ಭೇದವು ಕಲ್ಪಿತವೇ ಹೊರತು ವಾಸ್ತವವಲ್ಲ. ಇಲ್ಲಿ ದೇಹವು ಉಪಾಧಿ, ಮನುಷ್ಯದೇಹವೆಂಬ ಉಪಾಧಿಯುಳ್ಳ ಆತ್ಮನು ಜೀವ. ಈಶ್ವರದೇಹವು ಉಪಾಧಿಯಾಗಿದ್ದರೆ ಈಶ್ವರ. ಹೀಗೆ ಪ್ರತಿಯೊಂದು ಪ್ರಾಣಿಯೂ ದೇಹೋಪಾಧಿಯಿಂದ ಬೇರೆ ಬೇರೆ ಪ್ರಾಣಿಯು ಹೆಸರನ್ನು ಪಡೆದಿದೆಯೆಂದರಿಯಬೇಕು. ತತ್ತ್ವಮಸಿ – ಮುಂತಾದ ವಾಕ್ಯಗಳಿಂದ ಜೀವಾತ್ಮ–ಪರಮಾತ್ಮರಿಗೆ ಐಕ್ಯವನ್ನು ಹೇಳಲಾಗಿದೆ. **ತತ್ ತ್ವಮಸಿ** ಎಂಬ ವಾಕ್ಯದ ಹಿಂದೆ **ತತ್ ಸತ್ಯಂ ಸ ಆತ್ಮಾ** ಎಂಬ ವಾಕ್ಯವಿದೆ. ಆತನು ಆತ್ಮ ಅದೇ ಸತ್ಯ ಎಂದರ್ಥ. ಈ ಮಹಾವಾಕ್ಯದಲ್ಲಿಯೂ ಸತ್ಯವಾದ ಆ ಆತ್ಮ ಎಂದು **ತತ್** ಪದದ ಅರ್ಥ, ಅದು **ತ್ವ**ಮಸಿ ನೀನಾಗಿದ್ದೀಯೆ ಎಂದರ್ಥ. ಲೋಕದಲ್ಲಿ **ಸೋಽಯಂ ಪುರುಷಃ** ಎಂದು ಹೇಳುತ್ತೇವಷ್ಟೆ, ಅದರರ್ಥವೇನು? 'ಆತನೇ ಈ ಮನುಷ್ಯ' ಎಂದರ್ಥ. ನಾನು ಕಾಶಿಯಲ್ಲಿ ನೋಡಿದ್ದೆನಷ್ಟೆ, ಆತನೇ ಇವನು ಎಂದು ಅಭಿಪ್ರಾಯ. ನಾನು ಕಾಶಿಯಲ್ಲಿ ನೋಡಿದಾಗ ಬೇರೆ ಬಟ್ಟೆಯನ್ನು ಹಾಕಿಕೊಂಡಿದ್ದ. ಈಗ ಇನ್ನೊಂದು ಬಗೆಯ ಬಟ್ಟೆಯನ್ನು ಹಾಕಿಕೊಂಡಿದ್ದಾನೆ. ಆದರೆ ಮನುಷ್ಯನು ಆತನೇ ಎಂದು ಆಶಯ. ಈ ಬಗೆಯ ಆಶಯದಿಂದ **ತತ್ತ್ವಮಸಿ** ಎಂಬ ವಾಕ್ಯವೂ ಹೊರಟಿದೆ. ಅದನ್ನೀಗ ವಿವರಿಸಲಾಗುವುದು. **ತತ್‌ತ್ವಮ್** ಎಂಬೆರಡು ಪದಾರ್ಥಗಳಿಗೂ ಅಭೇದವು ಸಂಬಂಧ. ಪ್ರಕೃತ ಇದನ್ನು ಸಾಮಾನಾಧಿಕರಣ್ಯ ಸಂಬಂಧ ಎಂದು ಶಾಸ್ತ್ರಕಾರರು ಹೇಳುತ್ತಾರೆ. ಇದರ ವಿವರಣೆ ಇಲ್ಲಿ ಬೇಡ.

**ತತ್** ಎಂಬ ಶಬ್ದದಿಂದ ಜಗತ್ತಿಗೆ ಕಾರಣವಾದ ವಸ್ತುವನ್ನು ಇಲ್ಲಿ ಪರಾಮರ್ಶಿಸಲಾಗಿದೆ. **ತ್ವಂ** ಶಬ್ದದಿಂದ ಮನುಷ್ಯದೇಹ ಅಂತಃಕರಣಾದಿಗಳಿಂದ ಕೂಡಿದ ಜೀವನನ್ನು ಗ್ರಹಿಸಿದೆ. ಉದ್ದಾಲಕ ಮಹರ್ಷಿಯು ತನ್ನ ಮಗನಾದ ಶ್ವೇತಕೇತುವಿಗೆ ಹೇಳುವ ಮಾತು ಇದು. ಪ್ರಕೃತದಲ್ಲಿ **ತ್ವಂ** ಎಂದರೆ ಶ್ವೇತಕೇತುವೆಂಬ ಜೀವನೆಂದರ್ಥ.

**ಸೋಽಯಂ ಪುರುಷಃ** ಎಂಬಲ್ಲಿ **ಸಃ** ಎಂದರೆ – ನಾನು ಕಾಶಿಯಲ್ಲಿ ಕಳೆದ ವರ್ಷ ನೋಡಿದ್ದ ಮನುಷ್ಯನೆಂದು ಅರ್ಥವಷ್ಟೆ, ಆ ದೇಶ, ಕಾಲಗಳ ಸಂಬಂಧವುಳ್ಳ ವ್ಯಕ್ತಿ ಅವನು. **ಅಯಂ ಪುರುಷಃ** ಎಂದರೆ ಈ ಊರಿನಲ್ಲಿ ಈಗ ಎದುರಿಗಿದ್ದವನು ಎಂದರ್ಥ. ಈ ದೇಶ ಕಾಲಗಳು ಬೇರೆ. ದೇಶ, ಕಾಲ, ಬಟ್ಟೆ – ಮೊದಲಾದವು ಉಪಾಧಿಗಳು. ಅವೆಲ್ಲವನ್ನೂ ಕಳಚಿ ಹಾಕಿದಾಗ ನೋಡಿದ ಮನುಷ್ಯನು ಒಬ್ಬನೇ ಆಗಿರುತ್ತಾನೆ. ಹಾಗೆಯೇ ಪ್ರಕೃತದಲ್ಲಿ **ಜಗತ್ಕಾರಣನಾಗಿ ಈಶ್ವರನ ದೇಹವನ್ನು ಧರಿಸಿದವನೇ ಮನುಷ್ಯ ದೇಹವನ್ನು ಧರಿಸಿ ಶ್ವೇತಕೇತು ಎಂಬ ಹೆಸರನ್ನು ಪಡೆದಿರತಕ್ಕ ನೀನು** ಎಂದು ವಾಕ್ಯಾರ್ಥ. ಜಗತ್ಕಾರಣತ್ವ, ಈಶ್ವರ ದೇಹ ಇತ್ಯಾದಿಯಾದ ಉಪಾಧಿಗಳನ್ನೂ ಮನುಷ್ಯ ದೇಹ, ಶ್ವೇತಕೇತು ಎಂಬ ಹೆಸರು ಇತ್ಯಾದಿಯಾದ ಉಪಾಧಿಗಳನ್ನೂ ತೆಗೆದು ಹಾಕಿದರೆ ಉಳಿಯುವ ಶುದ್ಧವಾದ ಬ್ರಹ್ಮವೆಂಬ ಚೈತನ್ಯವು ಒಂದೇ ಆಗುತ್ತದೆ. ವಿಶೇಷಣಗಳಾದ ಉಪಾಧಿಗಳನ್ನು ತೆಗೆದುಹಾಕಿ ವಿಶೇಷ್ಯವಾಗಿದ್ದ ಬ್ರಹ್ಮವನ್ನು ಮಾತ್ರ ಈ ವಾಕ್ಯವು ಬೋಧಿಸುತ್ತದೆ. ಮಾತಿನಲ್ಲಿದ್ದ ಒಂದು ಭಾಗವನ್ನು ಮಾತ್ರ ಗ್ರಹಿಸಬೇಕಾದ್ದರಿಂದ ಇಲ್ಲಿ ಭಾಗಲಕ್ಷಣಾ ಇದೆ ಎಂದು ತಿಳಿಯಬೇಕು. ಮಾತಿನಲ್ಲಿದ್ದ ಒಂದು ಅಂಶವನ್ನು ತ್ಯಜಿಸಬೇಕಾದ್ದರಿಂದ ಭಾಗತ್ಯಾಗಲಕ್ಷಣ ಎಂದೂ ಹೇಳುತ್ತಾರೆ. ಈ ರೀತಿಯಾದ ಅರ್ಥವನ್ನು ಬೋಧಿಸುವ ಶಬ್ದಶಕ್ತಿಗೆ ಭಾಗಲಕ್ಷಣಾ ಅಥವಾ ಭಾಗತ್ಯಾಗಲಕ್ಷಣಾ ಎಂದು ಹೆಸರು. ಒಟ್ಟಿನಲ್ಲಿ **ತತ್ತ್ವಮಸಿ** ಎಂಬ ಶ್ರುತಿಯು ಪರಮಾತ್ಮನೇ ನಮ್ಮ ದೇಹದಲ್ಲಿರುವ ಜೀವಾತ್ಮ ಎಂದು ಹೇಳುತ್ತದೆ.

ಜೀವಾತ್ಮನು ಪರಮಾತ್ಮನ ಅಂಶವೂ ಅಲ್ಲ. ಆತನ ವಿಕಾರವೂ ಅಲ್ಲ. ಅಖಂಡನೂ ಆಕಾಶದಂತೆ ಸರ್ವವ್ಯಾಪಿಯೂ ಆದ ಪರಮಾತ್ಮನಿಗೆ ಅಂಶ (ಭಾಗ) ಎಂಬುದೇ ಇಲ್ಲ. ಆತನು ಅವಯವರಹಿತನೂ ಕೂಟಸ್ಥನೂ ಆದ್ದರಿಂದ ವಿಕಾರವೂ ಇಲ್ಲ. ಅಲ್ಲದೆ ಪರಮಾತ್ಮನೇ ಸ್ವತಃ ದೇಹವನ್ನು ಪ್ರವೇಶಿಸಿದ್ದಾನೆ. **ತತ್‌ಸೃಷ್ಟ್ವಾ ತದೇವಾನುಪ್ರಾವಿಶತ್** ಎಂದು ಶ್ರುತಿಯು ಹೇಳಿದೆ. ಹೀಗೆಯೇ

ಜೀವಾತ್ಮ ಪರಮಾತ್ಮರಿಗೆ ಸಾದೃಶ್ಯ, ಸ್ವಸ್ವಾಮಿಭಾವ, ಕಾರ್ಯಕಾರಣಭಾವ – ಮುಂತಾದ ಬೇರಾವ ಸಂಬಂಧವೂ ಘಟಿಸುವುದಿಲ್ಲವಾದ್ದರಿಂದ ಅಭೇದವನ್ನು ಹೇಳಬೇಕಾಗುತ್ತದೆ. ವಸ್ತುತಃ ಅಖಂಡೈಕಪದಾರ್ಥ ಎನ್ನುವುದೇ ಸರಿ.

ಉದ್ದಾಲಕಮಹರ್ಷಿಗಳು ಶ್ವೇತಕೇತುವಿಗೆ **ನೀನು** ಎಂದು ಹೇಳುವುದು ಸಮಸ್ತ ಜೀವಾತ್ಮರಿಗೂ ಉಪಲಕ್ಷಣ. ಸಮಸ್ತ ಜೀವಾತ್ಮರೂ ಪರಬ್ರಹ್ಮಸ್ವರೂಪರೇ ಆಗಿದ್ದಾರೆಂದು ಅಭಿಪ್ರಾಯ. **ಐತದಾತ್ಮ್ಯಮಿದಂ ಸರ್ವಂ** ಎಂದು ಮೊದಲು ಹೇಳಿರುವುದರಿಂದ ಈ ಜಗತ್ತು ಸಹ ಆತ್ಮಸ್ವರೂಪವೇ. ಆತ್ಮಕ್ಕೆ ಅತಿರಿಕ್ತವಾಗಿ ಇನ್ನೊಂದು ವಸ್ತುವೇ ಇಲ್ಲ ಎಂದು ತಾತ್ಪರ್ಯ.

ಈ ಪ್ರಕಾರವಾಗಿ ಶ್ರೀ ದಕ್ಷಿಣಾಮೂರ್ತಿಯು ಗುರುಸ್ವರೂಪನಾಗಿ ಬಂದು ಉದ್ದಾಲಕ ಮಹರ್ಷಿಯಂತೆ ಆತ್ಮತತ್ತ್ವವನ್ನು ಪುಣ್ಯಾತ್ಮರಾದ ಶಿಷ್ಯರಿಗೆ ಬೋಧಿಸುತ್ತಾನೆ. ಯಾವ ಪುಣ್ಯಾತ್ಮನಾದ ಶಿಷ್ಯನು ಇದನ್ನರಿತು ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಾನೋ ಆತನಿಗೆ ಪುನರ್ಜನ್ಮವಿಲ್ಲ. ಅವನು ಸ್ವ–ಸ್ವರೂಪದಲ್ಲಿ ನಿಂತು ಮುಕ್ತನಾಗಿ ಬಿಡುತ್ತಾನೆ. ಅಂತಹ ಗುರುಮೂರ್ತಿಗೆ ನಮಸ್ಕಾರ ಎಂದರ್ಥ. ಸತ್ತಾ ಪ್ರಕಾಶಗಳು (ಅಸ್ತಿ,ಭಾತಿ) ವಸ್ತುತಃ ಬಿಂಬರೂಪನಾದ ಪರಮಾತ್ಮನಲ್ಲಿವೆ. ಪ್ರತಿಬಿಂಬರೂಪವಾದ ಜಗತ್ತಿನಲ್ಲಿ ಇರುವಂತೆ ಕಾಣಿಸಿಕೊಳ್ಳುತ್ತವೆ.

**ನಾನಾಚ್ಛಿದ್ರ ಘಟೋದರಸ್ಥಿತ ಮಹಾದೀಪ ಪ್ರಭಾಭಾಸ್ವರಂ**
**ಜ್ಞಾನಂ ಯಸ್ಯ ತು ಚಕ್ಷುರಾದಿ ಕರಣದ್ವಾರಾ ಬಹಿಃಸ್ಪಂದತೇ ।**
**ಜಾನಾಮೀತಿ ತಮೇವ ಭಾಂತಮನುಭಾತ್ಯೇತತ್ ಸಮಸ್ತಂ ಜಗತ್**
**ತಸ್ಮೈ ಶ್ರೀ ಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥ ೪ ॥**

ಅನೇಕ ರಂಧ್ರಗಳಿರುವ ಗಡಿಗೆಯ ನಡುವೆ ಇರುವ ದೊಡ್ಡ ದೀಪದ ಪ್ರಭೆಯಂತೆ ಪ್ರಕಾಶಿಸುವ ಯಾವಾತನ ಜ್ಞಾನವು ಕಣ್ಣು ಮುಂತಾದ ಇಂದ್ರಿಯಗಳ ಮೂಲಕ ಹೊರಗೆ ಚಿಕ್ಕಪ್ರಮಾಣದಲ್ಲಿ ಜಿನುಗುವುದೋ, ಪ್ರಕಾಶಮಾನನಾದ ಯಾವಾತನನ್ನು ಅನುಸರಿಸಿ "ನಾನು ತಿಳಿದುಕೊಳ್ಳುತ್ತೇನೆ" ಎಂಬಲ್ಲಿ ಈ ಸಮಸ್ತ ಜಗತ್ತೂ ಪ್ರಕಾಶಿಸುತ್ತದೆಯೋ ಅಂತಹ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ಇದೋ ಈ ನಮಸ್ಕಾರ.

ಅನೇಕ ತೂತುಗಳಿರುವ ಒಂದು ಗಡಿಗೆಯ ನಡುವೆ ದೀಪ ಉರಿಯುತ್ತಿದ್ದಾಗ ಅದರ ಬೆಳಕು ಆ ತೂತುಗಳಿಂದ ಹೊರಗೆ ಚಿಮ್ಮುತ್ತದೆ. ಹಾಗೆ ಚಿಮ್ಮುವ ಬೆಳಕು ಚಿಕ್ಕದಾದರೂ ಅಧಿಕವಾಗಿ ಪ್ರಕಾಶಿಸುವ ದೀಪದಿಂದಲೇ ಬಂದದ್ದಾಗಿರುತ್ತದೆ. ನಮ್ಮ ಈ ದೇಹವೇ ಒಂದು ಗಡಿಗೆಯೆಂದು ಭಾವಿಸಿದರೆ ಈ ದೇಹದಲ್ಲಿ ಪ್ರಕಾಶಿಸುವ ಪ್ರತ್ಯಗಾತ್ಮನೇ ಒಂದು ದೊಡ್ಡ ದೀಪವಾಗುತ್ತಾನೆ. ಐದು ಜ್ಞಾನೇಂದ್ರಿಯಗಳೇ ಈ ದೇಹವೆಂಬ ಗಡಿಗೆಗೆ ಇರುವ ರಂಧ್ರಗಳು. ನಾವು ಇಂದ್ರಿಯಗಳ ಮೂಲಕ ಬಾಹ್ಯ ವಸ್ತುಗಳ ಜ್ಞಾನವನ್ನು ಪಡೆಯುತ್ತೇವೆ. ಈ ಜ್ಞಾನದ ತುಣುಕುಗಳು ಗಡಿಗೆಯ ರಂಧ್ರದಿಂದ ಹೊರಬಂದ ಬೆಳಕುಗಳಿದ್ದಂತೆ. ಗಡಿಗೆಯಿಂದ ಹೊರಬಂದ ಬೆಳಕು ಅಲ್ಪವಾದರೂ ಹೊರಗಿನ ವಸ್ತುವನ್ನು ಸ್ವಲ್ಪವಾದರೂ ಪ್ರಕಾಶ ಪಡಿಸುತ್ತದೆ. ನಮಗೆ ಇಂದ್ರಿಯಗಳಿಂದಾಗುವ ಜ್ಞಾನವೂ ಹಾಗೆಯೇ ಅತ್ಯಲ್ಪವಾದದ್ದು.

ನಾನು ಈ ಹಸುವನ್ನು ನೋಡುತ್ತಿದ್ದೇನೆ ಎಂದಾಗ ಆಗುವ ಜ್ಞಾನವು ಚಾಕ್ಷುಷ ಎಂದರೆ ಚಕ್ಷುಸ್ಸಿನಿಂದ (ಕಣ್ಣಿನಿಂದ) ಬಂದ ಜ್ಞಾನ. ಇದರಿಂದ ಹಸು ಪ್ರಕಾಶಕ್ಕೆ ಒಳಗಾಗುತ್ತದೆ. ಹಸುವಿನ ಪ್ರಕಾಶವು ನಮ್ಮ ದೇಹದಲ್ಲಿರುವ ಪ್ರತ್ಯಗಾತ್ಮನ ಪ್ರಕಾಶದಿಂದಲೇ ಬಂದದ್ದು. ಹೀಗೆ ಇಂದ್ರಿಯಗಳ ಮೂಲಕ ಪ್ರಕಾಶಕ್ಕೆ ಬಂದ ಸಕಲ ಜಗತ್ತೂ ಆ ಪ್ರಕಾಶವನ್ನು ಪ್ರತ್ಯಗಾತ್ಮನಿಂದಲೇ ಪಡೆದು ಕೊಂಡಿರುತ್ತದೆ. ಆತ್ಮನು ಸ್ವಯಂಪ್ರಕಾಶ. **ತಮೇವ ಭಾಂತಮನು ಭಾತಿ ಸರ್ವಮ್** ಎಂಬ ಶ್ರುತಿಯು ಬೋಧಿಸಿದಂತೆ ಈ ಜಗತ್ತೆಲ್ಲವೂ ಆತ್ಮನಿಂದಲೇ ಬೆಳಕನ್ನು ಪಡೆದು ಆತ್ಮನೊಡನೆಯೇ ಪ್ರಕಾಶಿಸುತ್ತದೆ. ದೀಪದಿಂದ ಬೆಳಕನ್ನು ಪಡೆದು ಘಟಪಟಾದಿಗಳು ಪ್ರಕಾಶಿಸುವ ಹಾಗೆ ಎಂದು ತಾತ್ಪರ್ಯ.

ಇಲ್ಲಿ ವಿಚಾರ ಮಾಡಬೇಕಾದ್ದಿದೆ – ಮನಸ್ಸು ಇಂದ್ರಿಯಗಳ ಮೂಲಕ ಬಾಹ್ಯ ವಸ್ತುಗಳನ್ನು ಗ್ರಹಿಸುತ್ತದೆ ಎಂಬುದು ನಮ್ಮ ಅನುಭವದಲ್ಲಿದೆ. ಬಾಹ್ಯಗಳಾದ ಘಟಪಟಾದಿಗಳು ತಾವೇ ಇಂದ್ರಿಯಗಳಿಗೆ ತೋರಿಸಿಕೊಳ್ಳುತ್ತವೆ, ಎಂದರೆ ಅವು ತಮ್ಮನ್ನು ಸ್ವತಃ ಪ್ರಕಾಶಿಸಿಕೊಳ್ಳುತ್ತವೆ. ಪ್ರತ್ಯಗಾತ್ಮನ ಪ್ರಕಾಶದಿಂದ ಅವು ತೋರುತ್ತವೆ ಎಂದು ಏಕೆ ಹೇಳಬೇಕು? ಸೂರ್ಯನ ಬೆಳಕು ಅಥವಾ ದೀಪದ ಬೆಳಕು ಸಹಾಯಕ್ಕಿದ್ದರಾಯಿತು. ಪ್ರತ್ಯಗಾತ್ಮನಾದ ಈಶ್ವರನ ಪ್ರಕಾಶವು ಏಕೆ ಬೇಕು? ಈ ಪ್ರಶ್ನೆಗೆ ಉತ್ತರವೇನೆಂದರೆ, ಘಟಪಟಾದಿಗಳು ಜಡವಸ್ತುಗಳು. ಅವುಗಳಿಗೆ ಪ್ರಕಾಶಿಸುವ ಶಕ್ತಿಯಿಲ್ಲ. 'ನಾನು ಗಡಿಗೆಯನ್ನು ನೋಡುತ್ತೇನೆ. ಅದು ನನಗೆ

ಕಾಣುತ್ತದೆ' ಎಂಬ ಅನುಭವ ಸರ್ವರಿಗೂ ಇದೆಯಷ್ಟೆ. ಇಲ್ಲಿ ನಾನು ನಾನು ಎಂದು ಹೇಳಿಕೊಳ್ಳುವವನೊಬ್ಬ ಇರಬೇಕಷ್ಟೆ. ಅವನಿಲ್ಲದಿದ್ದರೆ ಯಾವ ವಸ್ತುವೂ ತೋರುವುದಿಲ್ಲ. ಸಮಸ್ತ ಜಗತ್ತೂ ಇಲ್ಲವೆಂದೇ ನಿಶ್ಚಯವಾದೀತು. ಆದರೆ ಬಾಹ್ಯವಸ್ತುಗಳು ಹಿಂದೆಯೂ ಇದ್ದವು, ಮುಂದೆಯೂ ಇರುತ್ತವೆ. ಈಗಲೂ ಇವೆ ಎಂದು ನಮಗೆ ನಂಬಿಕೆ ಇದೆ. ಈ ನಂಬಿಕೆಗೆ 'ನಾನು' ಎಂದುಕೊಳ್ಳತಕ್ಕವನೇ ಕಾರಣ. 'ನಾನುಂಟು ಮೂರು ಲೋಕ ಉಂಟು' ಎಂಬ ಗಾದೆಯೂ ಈ ನಂಬಿಕೆಗೆ ಕಾರಣ. ಒಂದು ರೀತಿಯಲ್ಲಿ ಆ ಗಾದೆಯು ಸತ್ಯವೇ ಆಗಿದೆ. ಆದ್ದರಿಂದ ಆ ವಸ್ತುಗಳ ಸತ್ತಾ (ಇರವು) 'ನಾನು' ಎಂಬುದಕ್ಕೆ ಅಧೀನ. 'ನಾನು' ಎನ್ನುವುದೇ ಪರಮಾರ್ಥದಲ್ಲಿ ಈಶ್ವರನಾದ್ದರಿಂದ ಜಗತ್ತಿನ ಅಸ್ತಿತ್ವವು (ಸತ್ತಾ) ಈಶ್ವರನನ್ನು ಅವಲಂಬಿಸಿದೆಯೆಂದೂ ಅವನಿಂದಲೇ ಪ್ರಕಾಶಿಸುತ್ತದೆಯೆಂದೂ ಸ್ಪಷ್ಟವಾಗುತ್ತದೆ. ಈಶ್ವರನು ನಿತ್ಯನಾದ್ದರಿಂದ ಕಾಲತ್ರಯದಲ್ಲಿಯೂ ಇರುತ್ತಾನೆ. ಆದ್ದರಿಂದಲೇ ಶ್ರುತಿಯು ಆತ್ಮನನ್ನು ಸತ್, ಚಿತ್ ಎಂದು ವರ್ಣಿಸಿದೆ. ಆತನೇ ಸತ್ (ಇರತಕ್ಕವನು) ಎಲ್ಲ ವಸ್ತುಗಳ ಇರವೂ ಅವನನ್ನು ಅವಲಂಬಿಸಿವೆ. ಅವನೇ ಚಿತ್ – ಪ್ರಕಾಶ ಸ್ವರೂಪನು. ಈಶ್ವರನಿಂದಲೇ ಜಗತ್ತು ಪ್ರಕಾಶಿಸುತ್ತದೆ ಎನ್ನುವುದು ಪ್ರಾಮಾಣಿಕವಾದ ಹೇಳಿಕೆ.

ಹಾಗಾದರೆ ಜಡವಾದ ಬುದ್ಧಿಯು ಬಾಹ್ಯವಸ್ತುಗಳನ್ನು ಹೇಗೆ ಗ್ರಹಿಸುತ್ತದೆ? ಹೇಗೆ ಪ್ರಕಾಶಿಸುತ್ತದೆ ಎಂಬ ಪ್ರಶ್ನೆ ಹುಟ್ಟಬಹುದು. ನಾವೀಗ ಹೇಳುವ ಉತ್ತರವನ್ನು ಸಾವಧಾನವಾಗಿ ಕೇಳಬೇಕು. ಸತ್ತ್ವ, ರಜಸ್ಸು, ತಮಸ್ಸುಗಳೆಂದು ಮೂರು ಗುಣಗಳಿವೆ. ಇದನ್ನು ಕಪಿಲ ಸಾಂಖ್ಯ ಶಾಸ್ತ್ರವೂ ಇತರ ದರ್ಶನಗಳೂ ಒಪ್ಪಿವೆ. ಆ ಗುಣಗಳಲ್ಲಿ ಸತ್ತ್ವಗುಣವು ಶುದ್ಧವಾದದ್ದು. ವೇದಾಂತ ಶಾಸ್ತ್ರದ ಪ್ರಕಾರ ಆತ್ಮನ ಹೊರತು ಉಳಿದ ಸಕಲ ವಸ್ತುಗಳಲ್ಲಿಯೂ ಈ ಮೂರು ಗುಣಗಳಿರುತ್ತವೆ. ಬುದ್ಧಿಯು ಸತ್ತ್ವಗುಣದ ಆಧಿಕ್ಯದಿಂದ ಕನ್ನಡಿಯಂತೆ ಸ್ವಚ್ಛವಾಗಿರುತ್ತದೆ. ಅದರಲ್ಲಿ ಆತ್ಮನ ಪ್ರತಿಬಿಂಬವು ಬೀಳುವುದರಿಂದ ಎಂದರೆ ಆತ್ಮಚೈತನ್ಯದ ಸಂಪರ್ಕದಿಂದ ಬುದ್ಧಿಯು ಕ್ರಿಯಾಶೀಲವಾಗುತ್ತದೆ. ಜಡವಾದ ಯಂತ್ರಕ್ಕೆ ವಿದ್ಯುಚ್ಛಕ್ತಿಯು ಸಂಪರ್ಕವಾದೊಡನೆ ಯಂತ್ರವು ಕ್ರಿಯಾಶೀಲವಾಗುತ್ತದೆಯಲ್ಲವೆ? ಹಾಗೆಯೇ ಬುದ್ದಿಯೂ ಚೈತನ್ಯ ಸಂಬಂಧದಿಂದ ಕ್ರಿಯಾಶೀಲವಾಗುತ್ತದೆ. ಆಗ ಬುದ್ಧಿಯು ಘಟಪಟಾದಿ ವಿಷಯಗಳ ಪ್ರತಿಬಿಂಬವನ್ನು ಗ್ರಹಿಸುತ್ತದೆ. ಬುದ್ಧಿಗೆ ಈ ಗ್ರಹಣ ಶಕ್ತಿ ಬಂದಿರುವುದು ಆತ್ಮಚೈತನ್ಯದ ಪ್ರಭಾವದಿಂದ. ಆದ್ದರಿಂದ ಸಮಸ್ತ ಪ್ರಪಂಚವನ್ನು ಬೆಳಗಿಸತಕ್ಕವನು

ಮೂಲದಲ್ಲಿ ಆತ್ಮನೇ ಎಂದು ತಿಳಿಯಬೇಕು. ಬುದ್ಧಿಯನ್ನೇ ಅಂತಃಕರಣವೆಂದೂ ಹೇಳುತ್ತಾರೆ. ಈ ಅಂತಃಕರಣದೊಡನೆ ಸಕಲ ಇಂದ್ರಿಯಗಳೂ ಸೇರಿಕೊಂಡಿವೆ. ಚಕ್ರದ ಸುತ್ತಲೂ ಇರುವ ಬಳೆಗೆ ಅಡ್ಡೆಗಾಲುಗಳು ಸೇರಿಕೊಂಡಂತೆ ಇಂದ್ರಿಯಗಳು ಬುದ್ಧಿಯ ಸಂಬಂಧವನ್ನು ಹೊಂದಿರುತ್ತದೆ. ಈ ಬುದ್ಧಿಯಲ್ಲಿ (ಅಂತಃಕರಣದಲ್ಲಿ) ಜನ್ಮಾಂತರದಲ್ಲಿ ಮಾಡಿದ್ದ ಪುಣ್ಯಾಪಾಪಗಳ ಸಂಸ್ಕಾರಗಳು ಸೇರಿಕೊಂಡಿರುತ್ತವೆ. ಪ್ರಾರಬ್ಧ ಕರ್ಮಗಳೆಂದರೆ ಕರ್ಮಜನ್ಯವಾದ ಈ ಸಂಸ್ಕಾರಗಳು. ಅವುಗಳ ಪ್ರೇರಣೆಯಿಂದ ಬುದ್ಧಿಯು ಇಂದ್ರಿಯಗಳ ಮೂಲಕ ಸುಖದುಃಖಗಳನ್ನು ಅನುಭವಿಸುವುದು ಜಾಗ್ರದವಸ್ಥೆಯಲ್ಲಿ. ಇಂದ್ರಿಯಗಳು ಕೆಲಸ ಮಾಡದೆ ವಿರಮಿಸಿದಾಗ ಜಾಗ್ರತ್ತಿನ ಸಂಸ್ಕಾರದಿಂದ ಮನಸ್ಸಿನಲ್ಲಿಯೇ ಸುಖ ದುಃಖಗಳನ್ನು ಯಾವಾಗ ಮನುಷ್ಯನು ಅನುಭವಿಸುತ್ತಾನೋ ಆಗ ಸ್ವಪ್ನಾವಸ್ಥೆಯಾಗಿರುತ್ತದೆ. ಜಾಗ್ರತ್ತಿನಲ್ಲಿ ಶ್ರೋತ್ರವೇ ಮೊದಲಾದ ಇಂದ್ರಿಯಗಳ ವ್ಯಾಪಾರವಿರುತ್ತದೆ. ಸ್ವಪ್ನದಲ್ಲಿ ಇಂದ್ರಿಯ ವ್ಯಾಪಾರಗಳಿರುವುದಿಲ್ಲ. ಕೇವಲ ಮನಸ್ಸೊಂದೇ ಕೆಲಸ ಮಾಡುತ್ತದೆ. ಯಾವಾಗ ಮನಸ್ಸೂ ಸಹ ಉಪಸಂಹೃತವಾಗಿ ವಿಶ್ರಮಿಸುತ್ತದೆಯೋ ಆಗ ಸುಷುಪ್ತಿಯೆಂಬ ಅವಸ್ಥೆಯಾಗಿರುತ್ತದೆ. ಅವಸ್ಥೆಯೆಂದರೆ ಜೀವಾತ್ಮನ ಒಂದಾನೊಂದು ಸ್ಥಿತಿ. ಈ ಸುಷುಪ್ತ್ಯವಸ್ಥೆಯಲ್ಲಿ ಮಾಯೆಯು ಜೀವನನ್ನು ಆವರಿಸಿಕೊಳ್ಳುವುದರಿಂದ ಮೂಢನಂತೆ, ಅಜ್ಞಾನಿಯಂತೆ ಆಗಿಬಿಡುತ್ತಾನೆ. ಆತನಿಗೆ ವಿಷಯಗಳೊಡನೆ ಸಂಬಂಧವು ತಪ್ಪಿ ಹೋಗುವುದರಿಂದ ಬಾಹ್ಯವಿಷಯವೇನೂ ತಿಳಿಯುವುದಿಲ್ಲ. ಮಾಯಾಕಲ್ಪಿತಗಳಾದ ಅಂತಃಕರಣಾದಿಗಳ ಸಂಪರ್ಕವು ತಪ್ಪಿದಾಗ ಆತ್ಮನು ತನ್ನ ಸ್ವಸ್ವರೂಪದಲ್ಲಿಯೇ ನಿಂತಿರುತ್ತಾನೆ. ಆದ್ದರಿಂದ ಎಚ್ಚರವಾದಾಗ "ನಾನು ಸುಖವಾಗಿ ನಿದ್ದೆ ಮಾಡಿದೆ. ಯಾವ ಬಾಹ್ಯ ವಿಷಯದ ಸಂಬಂಧವೂ ನನಗಿರಲಿಲ್ಲ" ಎಂದು ಹೇಳಿಕೊಳ್ಳುತ್ತಾನೆ.

ಈ ಪ್ರಕಾರವಾಗಿ 'ಅಹಂ' ಎಂಬುದರ ಪರಮಾರ್ಥಸ್ವರೂಪನಾದ ಪರಮಾತ್ಮನು ಪ್ರಕಾಶಿಸುತ್ತಿರುವುದರಿಂದ, ಸೂರ್ಯ ಚಂದ್ರಾದಿಗಳೂ ಆತನ ಪ್ರಕಾಶದಿಂದ ಬೆಳಗುತ್ತಾರೆ. ಇನ್ನು ಈ ಘಟಪಟಾದಿಗಳ ವಿಚಾರವಾಗಿ ಹೇಳತಕ್ಕದ್ದೇನಿದೆ? ಹೀಗೆ ಈ ಜಗತ್ತಿನ ಸಕಲ ವಸ್ತುಗಳನ್ನು ಬೆಳಗತಕ್ಕವನು ಪರಮಾತ್ಮನೆಂದೇ ಸಿದ್ಧವಾಗುತ್ತದೆ. ಆದ್ದರಿಂದ ಈ ಜಗತ್ತಿನ ಅಸ್ತಿತ್ವ, ಪ್ರಕಾಶ ಇವೆರಡೂ ಈಶ್ವರನಿಗೆ ಅಧೀನವಾಗಿವೆ ಎಂದು ತಿಳಿಯತಕ್ಕದ್ದು. ಆತನ ಸ್ವರೂಪವು **ಸತ್ಯಂ ಜ್ಞಾನಮನಂತಂ ಬ್ರಹ್ಮ** ಎಂದು ಶ್ರುತಿಯು ಹೇಳಿದೆ. ಈ ಬ್ರಹ್ಮನನ್ನು ಬಿಟ್ಟು

ಇನ್ನೊಂದು ವಸ್ತುವಿಲ್ಲ. **ಏಕಮೇವಾದ್ವಿತೀಯಂ ಬ್ರಹ್ಮ** ಎಂದು ಶ್ರುತಿಯೇ ಹೇಳುವುದರಿಂದ ಜಾಗ್ರತ್ ಸ್ವಪ್ನಗಳಲ್ಲಿ ಉಪಲಬ್ಧವಾಗತಕ್ಕದ್ದೆಲ್ಲವೂ ಮಿಥ್ಯೆ ಎಂದೂ ಉಪಲಬ್ಧವಾಗುವುದಾದರೂ ಜಡವೆಂದು ನಿಶ್ಚಿತವಾಗುತ್ತದೆ.

‘ಅಹಂ – ನಾನು’ ಎಂಬ ಜ್ಞಾನಕ್ಕೆ ಮೂಲನಾದವನು ಪರಮೇಶ್ವರನೇ ಆಗಿದ್ದಾನೆ. ಮಾಯೆಯೆಂಬ ಉಪಾಧಿಯಿಂದ ಈತನು ಜೀವನಾಗಿ ತೋರುತ್ತಿದ್ದಾನೆ. ಈ ಜಗತ್ತನ್ನು ಸೃಷ್ಟಿಸಿ, ತಾನೇ ಜೀವರೂಪದಿಂದ ಇದರೊಳಗೆ ಪ್ರವೇಶಿಸಿದನು ಎಂಬ ಶ್ರುತಿಯು ಇದಕ್ಕೆ ಪ್ರಮಾಣವಾಗಿದೆ. ಈ ’ಅಹಂ’ ಎಂದುಕೊಳ್ಳುವ ಆತ್ಮನು ನಿರ್ವಿಕಲ್ಪ, ಶುದ್ಧ, ಮಲಿನ ಎಂದು ಮೂರು ವಿಧವಾಗಿದ್ದಾನೆ. ನಿರ್ವಿಕಲ್ಪನೆಂದರೆ ಯಾವ ವಿಶಿಷ್ಟ ಕಲ್ಪನೆಗಳಿಗೂ ಒಳಗಾಗದವನು. ಅಸಂಗ, ವಿಕಾರರಹಿತ, ಅಸ್ಥೂಲ, ಅನಣು, ಅದೃಶ್ಯ, ಅಗ್ರಾಹ್ಯ ನಿರ್ಗುಣ ಎಂದು ಎಲ್ಲ ವಿಕಲ್ಪಗಳಿಗೂ ದೂರವಾದವನು. ಈತನೇ ಪರಮಾತ್ಮ, ಪರಬ್ರಹ್ಮ. ಧೂಳಿ, ಕತ್ತಲೆ, ಹೊಗೆ, ಮೋಡ – ಮುಂತಾದ ಯಾವುವೂ ಇಲ್ಲದ ಪರಿಶುದ್ಧವಾದ ಆಕಾಶದಂತೆ ಇರತಕ್ಕವನು. ಆಕಾಶದಂತೆ ಸರ್ವವ್ಯಾಪಿಯಾದ ವಿಭು. ದೇಹದಲ್ಲಿಯೇ ಇರುವ ಮತ್ತು ದೇಹೇಂದ್ರಿಯಾದಿಗಳಿಗಿಂತ ಅತಿರಿಕ್ತನಾದ ಆತ್ಮನು ಶುದ್ಧಾತ್ಮನೆನ್ನಬಹುದು. ದೇಹವೇ ಮೊದಲಾದ ಉಪಾಧಿಗಳಿಂದ ಮುಕ್ತನಾದವನು ಎಂದರ್ಥ. ವೇದಾರ್ಥಗಳನ್ನು ವಿಚಾರ ಮಾಡಿ ಮನಸ್ಸಿಗೆ ತಂದುಕೊಂಡಾಗ ತೋರುವ ಆತ್ಮನಿವನು. ಈತನು ವ್ಯಾಪಿಸಿಕೊಂಡಿರುವ ಸ್ಥಳವು ಪರಿಮಿತವಾದ್ದರಿಂದ ವಿಭುವಾದ ಆತ್ಮನೇ ಸಂಕುಚಿತನಾದಂತೆ ದೇಹದೊಳಗೆ ಮಾತ್ರ ತೋರತಕ್ಕವನು ಎಂದರ್ಥ. ವಿವೇಚನೆ ಮಾಡತಕ್ಕವರಿಗೆ ಹೊಳೆಯುವ ಆತ್ಮ ಸ್ವರೂಪವಿದು. ಮಲಿನಾತ್ಮನೆಂದರೆ ಮೂಢರು ಕಲ್ಪಿಸಿಕೊಂಡಿರುವ ಆತ್ಮ. ಕತ್ತಲೆಯಲ್ಲಿ ಕಾಣದ ಆಕಾಶದಂತೆ ದೇಹೇಂದ್ರಿಯಾದಿಗಳ ಸಂಸರ್ಗದಿಂದ ಕಲುಷಿತನಾದ ಆತ್ಮನಿವನು. ಕಲುಷಿತನೆಂದರೆ ಕಲುಷಿತನಾದಂತೆ ಇರತಕ್ಕವನು ಎಂದರ್ಥ. ಕತ್ತಲೆಯಿಂದ ಆಕಾಶವು ಕಾಣಿಸುವುದಿಲ್ಲ. ಆಕಾಶವು ಮಲಿನವಾದಂತೆ ತೋರುತ್ತದೆ. ಕತ್ತಲೆಯಿಂದ ಆಕಾಶವು ಲಿಪ್ತವಾಗಿರುವುದಿಲ್ಲ. ಹಾಗೆಯೇ ವಿವೇಚನೆ ಮಾಡದವರಿಗೆ ಮಲಿನಾತ್ಮನು ದೇಹಾದಿಗಳಿಂದ ಲಿಪ್ತನಾದಂತೆ ಕಾಣುತ್ತಾನೆ. ಆದರೆ ಅವನಿಗೆ ಯಾವ ಲೇಪವೂ ಆಗುವುದಿಲ್ಲ. ಪ್ರತ್ಯಗಾತ್ಮನನ್ನು ದೇಹಾದಿಗಳಿಂದ ಪೃಥಕ್ಕರಿಸಿ ನೋಡಲಾರದವರಿಗೆ ಲಿಪ್ತನಾದಂತೆ ತೋರುತ್ತಾನೆ. ಇದು ಮುಂದೆ ವಿವರಿಸುವ ಐದನೆಯ ಶ್ಲೋಕದಲ್ಲಿ ಸ್ಪಷ್ಟವಾಗುವುದು.

ಯಾವಾಗ ಜೀವನಿಗೆ ನಾನೇ ಈಶ್ವರನೆಂಬ ಜ್ಞಾನವು ಗುರೂಪದೇಶದಿಂದಲೂ ಶ್ರವಣ ಮನನಾದಿ ಸಾಧನಗಳಿಂದಲೂ ನಿಶ್ಚಿತವಾಗುವುದೋ ಆಗ ಅವನು ಪರಮಾತ್ಮನೇ. ಅವನು ಸರ್ವಜ್ಞನೂ ಸರ್ವಕರ್ತನೂ ಆಗಿ ಬಿಡುತ್ತಾನೆ. ಅಚಿಂತ್ಯವಾದ ಮಾಯಾಶಕ್ತಿಯಿಂದ ಸಂಮೂಢನಾದವನು 'ನಾನು ಜೀವ, ಅಲ್ಪಜ್ಞ, ಅಲ್ಪಶಕ್ತ' ಎಂದು ತಿಳಿದಿರುತ್ತಾನೆ. ಆತ್ಮಜ್ಞಾನವು ಪ್ರಾಪ್ತವಾಗಲು ಅವನು ಸ್ವಸ್ವರೂಪವನ್ನೈದಿ ಪ್ರಕಾಶಿಸುತ್ತಾನೆ. ಆಗ ಆತ್ಮ ಸಂಬಂಧಿಗಳಾದ ಎಲ್ಲ ವಿಕಲ್ಪಗಳೂ ಅಡಗಿ ಹೋಗುತ್ತವೆ. ಅವಿದ್ಯೆಯೆಂಬ ಜವನಿಕೆಯು (ಮರೆ ಮಾಡುವ ಬಟ್ಟೆ) ಸರಿದೊಡನೆ, ತಾನೇ ಪರಮೇಶ್ವರನಾದ ದಕ್ಷಿಣಾಮೂರ್ತಿಯೆಂಬುದು ಅರಿವಿಗೆ ಬರುತ್ತದೆ. ಇಂತಹ ಅದ್ಭುತವಾದ ಲೀಲಾನಾಟಕವನ್ನಾಡುವ ದಕ್ಷಿಣಾಮೂರ್ತಿಯು ತನ್ನ ಸ್ವಸ್ವರೂಪವನ್ನು ತೋರಿಸಿ ಅನುಗ್ರಹಿಸಲೆಂದು ಪ್ರಾರ್ಥಿಸೋಣ!.ಅವನಿಗೆ ನಮಸ್ಕಾರ.

**ದೇಹಂ ಪ್ರಾಣಮಪೀಂದ್ರಿಯಾಣ್ಯಪಿ ಚಲಾಂ ಬುದ್ಧಿಂ ಚ ಶೂನ್ಯಂ ವಿದುಃ**
**ಸ್ತ್ರೀಬಾಲಾಂಧಜಡೋಪಮಾಸ್ತ್ವಹಮಿತಿ ಭ್ರಾಂತಾ ಭೃಶಂ ವಾದಿನಃ।**
**ಮಾಯಾಶಕ್ತಿವಿಲಾಸ ಕಲ್ಪಿತ ಮಹಾವ್ಯಾಮೋಹ ಸಂಹಾರಿಣೇ**
**ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ।೫।**

ಏನೂ ಗೊತ್ತಿಲ್ಲದ ಸಾಮಾನ್ಯ ಹೆಂಗಸರು, ಮಕ್ಕಳು, ಕುರುಡರು, ಜಡಬುದ್ಧಿಯವರು ಇಂಥವರಿಗೆ ಹೋಲಿಸಬಹುದಾದ ಕೆಲವರು ಈ ದೇಹವೇ ಆತ್ಮ ಎನ್ನುತ್ತಾರೆ. ಇನ್ನೂ ಕೆಲವರು ಪ್ರಾಣವು ಆತ್ಮವೆನ್ನುತ್ತಾರೆ. ಹೀಗೆಯೇ ಇತರರು ಇಂದ್ರಿಯಗಳೇ ಆತ್ಮವೆನ್ನುತ್ತಾರೆ. ಚಂಚಲವಾದ ಬುದ್ಧಿಯು ಆತ್ಮವೆಂದು ಕೆಲವರು ತಿಳಿದುಕೊಂಡಿದ್ದಾರೆ. ಬೌದ್ಧರು ಶೂನ್ಯವೇ ಆತ್ಮವೆಂದು ವಾದಿಸುತ್ತಾರೆ. ಇವರೆಲ್ಲರೂ ಭ್ರಾಂತರು. ತೋರಿದಂತೆ ಮಾತಾಡುವ ವಾಚಾಳರು. ಭಗವಂತನ ಮಾಯಾಶಕ್ತಿಯ ವಿಲಾಸದಿಂದ ಈ ಜನರ ಬುದ್ಧಿಗೆ ಮಂಕು ಹಿಡಿದಿದೆ. ಇಂತಹ ಮಂಕುತನವನ್ನು ನಾಶಗೊಳಿಸತಕ್ಕ ಶ್ರೀ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ಇದೋ ಈ ನಮಸ್ಕಾರ.

ವೇದಾಂತ, ಪುರಾಣ, ಧರ್ಮಶಾಸ್ತ್ರ ಮುಂತಾದ ನಮ್ಮ ಗ್ರಂಥಗಳು ಅಜ್ಞಾನಿಗಳಾದ ನಮ್ಮ ಆತ್ಮೋದ್ಧಾರಕ್ಕಾಗಿ ಬಂದಿವೆ. ಅವು ಹಣ ಕೀರ್ತಿಗಳ ಆಸೆಗಾಗಿ ಬರೆದ ಗ್ರಂಥಗಳಲ್ಲ. ರಚಿಸಿದವರ ಹೆಸರು ಸಹ ನಮಗೆ ಸರಿಯಾಗಿ ತಿಳಿಯದು. ಈ ಗ್ರಂಥಗಳನ್ನು ಬಹಳ ಜನರು ಓದಿಲ್ಲ. ಕೆಲವರು ಓದಿದ್ದರೂ

ಅವರ ವ್ಯಾಸಂಗ ಅತ್ಯಲ್ಪವಾದದ್ದು. ಹಿಂದಿನ ಜನ್ಮಗಳ ಕೆಟ್ಟ ಸಂಸ್ಕಾರಗಳ ಬಲದಿಂದ ತಪ್ಪಾಗಿ ತಿಳಿದುಕೊಂಡು ಜನರನ್ನು ತಪ್ಪುದಾರಿಗೆ ಎಳೆಯುತ್ತಾರೆ. ರಜೋಗುಣತಮೋಗುಣಗಳ ಪ್ರಾಬಲ್ಯದಿಂದ ಈ ಜನರು ಮಹಾಮೋಹಕ್ಕೆ ಒಳಗಾಗಿದ್ದಾರೆ. ಈ ಮಹಾಮೋಹವು ಸಡಿಲಬೇಕಾದರೆ ಅವರು ಶ್ರೀ ಗುರುಮೂರ್ತಿಗೆ ಶರಣಾಗಬೇಕು. ಬೇರೆ ದಾರಿ ಇಲ್ಲ.

ಈ ಅಜ್ಞಾನಿಗಳಲ್ಲಿ ಹಲವು ಬಗೆಯ ವಾದಿಗಳಿದ್ದಾರೆ. ಅವರು ವಾದಿಸುವ ಕ್ರಮ ಹೀಗೆ

**ಚಾರ್ವಾಕರು (ನಾಸ್ತಿಕರು)**

ವೇದಾಂತಿಗಳು ಹೇಳುವಂತೆ ದೇಹಾತಿರಿಕ್ತನಾದ ಆತ್ಮನಿಲ್ಲ. ಈ ದೇಹವನ್ನೇ ಆತ್ಮವೆನ್ನಬಹುದು. ನಮಗೆ ಬೇಕಾದ್ದನ್ನು ಸಾಧಿಸಿಕೊಡತಕ್ಕ ದೇಹವಿರುವಾಗ ಕಣ್ಣಿಗೆ ಕಾಣದ ಆತ್ಮನೊಬ್ಬನಿದ್ದಾನೆನ್ನುವುದು ಮೂಢನಂಬಿಕೆಯಾಗುತ್ತದೆ. ಪ್ರತ್ಯಕ್ಷವೇ ಸರಿಯಾದ ಪ್ರಮಾಣ. ಎಂದೂ ಪ್ರತ್ಯಕ್ಷವಾಗದೇ ಇರತಕ್ಕದ್ದನ್ನು ಇದೆಯೆಂದು ಒಪ್ಪಲು ಶಕ್ಯವಿಲ್ಲ. ಪೃಥ್ವಿ, ಜಲ, ಅಗ್ನಿ, ವಾಯು ಈ ನಾಲ್ಕೇ ಮಹಾಭೂತಗಳು. ಆಕಾಶವೆಂಬುದು ಒಂದು ವಸ್ತುವಲ್ಲ. ಏನೂ ಇಲ್ಲದೆ ಖಾಲಿಯಾದ ಸ್ಥಳವನ್ನು ಆಕಾಶವೆಂದು ಹೇಳುತ್ತಾರೆ. ಅದು ಕೇವಲ ವ್ಯಾವಹಾರಿಕ. ನಾವು ಸಾಧಿಸಬೇಕಾದದ್ದು ಅರ್ಥ ಮತ್ತು ಕಾಮ. ಇವೆರಡೇ ಪುರುಷಾರ್ಥಗಳು. ಲೋಕನೀತಿಯನ್ನು ಪಾಲಿಸುವುದೇ ಧರ್ಮ. ಅದಲ್ಲದೆ ಬೇರೆ ಧರ್ಮ ಎಂಬುದಿಲ್ಲ. ಮೋಕ್ಷ ಎನ್ನುವುದು ಸುಳ್ಳು. ಪ್ರತಿಯೊಬ್ಬರಿಗೂ ಸಾವು ಬರುವುದರಿಂದ ದೇಹದ ಬಿಡುಗಡೆಯೇ ಮೋಕ್ಷ. ಹುಟ್ಟುತ್ತದೆ, ಇದೆ, ಬೆಳೆಯುತ್ತದೆ – ಮುಂತಾದ ಆರು ಭಾವವಿಕಾರಗಳು ದೇಹಕ್ಕೆ ಒದಗುತ್ತವೆ. ಬ್ರಾಹ್ಮಣ, ಶೂದ್ರ ಮುಂತಾದ ಜಾತಿವಿಭಾಗವೂ ವರ್ಣಾಶ್ರಮಗಳೂ ದೇಹಕ್ಕೆ ಸಂಬಂಧಿಸಿದವು. ಶತಾಯುರ್ಭವ – ನೂರುವರ್ಷ ಬದುಕು ಎಂದು ಹೇಳುವುದು ದೇಹಕ್ಕೇ ಹೊರತು ಆತ್ಮಕ್ಕಾಗಿ ಅಲ್ಲ. ಆತ್ಮನಿಗೆ ಹುಟ್ಟು ಸಾವುಗಳೇ ಇಲ್ಲವೆಂದು ಆಸ್ತಿಕರು ಹೇಳುವುದುಂಟು. ಹಾಗೇ ಆತ್ಮನಿರುವುದಾದರೆ ನೂರುವರ್ಷ ಬದುಕು ಎಂದು ಹೇಳುವುದು ತಪ್ಪಾಗುತ್ತದೆ. ಆಶೀರ್ವಾದವು ಆತ್ಮನಿಗಲ್ಲ, ದೇಹಕ್ಕೆ ಎಂದು ಈ ಆಶೀರ್ವಾದದಿಂದಲೇ ಗೊತ್ತಾಗುತ್ತದೆ. ಸ್ವರ್ಗ, ನರಕ, ಪಾಪ, ಪುಣ್ಯ ಎಂದು ಹೇಳುವುದೆಲ್ಲವೂ ಮೌಢ್ಯವೇ ಸರಿ.

**ಪ್ರಾಣಾತ್ಮವಾದಿಗಳು :**

ಇವನಲ್ಲಿ ಪ್ರಾಣ ಇದೆ. ಸಾಯಲಿಲ್ಲ, ಉಸಿರಾಡುತ್ತಾನೆ. ಆದ್ದರಿಂದ ಬದುಕಿದ್ದಾನೆ–ಎಂದು ಎಲ್ಲರೂ ಹೇಳುತ್ತಾರೆ. ಹಸಿವು, ಬಾಯಾರಿಕೆಗಳು ಪ್ರಾಣವಾಯುವಿನ ಕಾರ್ಯಗಳು. ನಾನು ಹಸಿದಿದ್ದೇನೆ. ನನಗೆ ಬಾಯಾರಿಕೆಯಾಗಿದೆ. ಎಂದು ಹೇಳುತ್ತೇವೆ. ಇಲ್ಲಿ ನಾನು, ನನಗೆ ಎನ್ನುವುದು ಪ್ರಾಣಕ್ಕೆ ಸಂಬಂಧಿಸುತ್ತದೆ. ಆದ್ದರಿಂದ ಪ್ರಾಣವೇ ಆತ್ಮ.

**ಬುದ್ಧಿಯೇ ಆತ್ಮವೆನ್ನತಕ್ಕವರು :**

ನಾನು ತಿಳಿದಿದ್ದೇನೆ, ನಾನು ಬಯಸುತ್ತೇನೆ ಎಂಬ ವ್ಯವಹಾರವಿರುವುದರಿಂದ ಬುದ್ಧಿ ಅಥವಾ ಅಂತಃಕರಣವೇ ಆತ್ಮ.

ಹೀಗೆ ಹೇಳತಕ್ಕವರಿದ್ದಾರೆ. ಇವರೆಲ್ಲರೂ ಈಶ್ವರನ ಮಾಯೆಯಿಂದ ಮೂಢರಾದವರು. ವಿವೇಚನಾ ಶಕ್ತಿಯನ್ನು ಕಳೆದುಕೊಂಡವರು. ಇನ್ನು ಶೂನ್ಯವೇ ಆತ್ಮವೆನ್ನತಕ್ಕ ಬೌದ್ಧಮತವು ಅವೈದಿಕವಾದ್ದರಿಂದಲೂ ಚಾರ್ವಾಕ ಮತದಂತೆ ಆತ್ಮವೆಂಬ ವಸ್ತುವಿಲ್ಲ ಎಂಬ ಅರ್ಥದಲ್ಲಿಯೇ ಪರ್ಯವಸಾನವಾಗುವುದರಿಂದಲೂ ಅದನ್ನಿಲ್ಲಿ ವಿವರಿಸುವುದು ಅನಾವಶ್ಯಕ.

ಇವರೆಲ್ಲರೂ ಆತ್ಮವನ್ನು ತಪ್ಪಾಗಿ ತಿಳಿದುಕೊಂಡಿದ್ದಾರೆ. ಇವರ ಮತದಲ್ಲಿ ನಾನಾ ದೋಷಗಳಿವೆ. ಅವೆಲ್ಲವನ್ನೂ ಸಂಗ್ರಹಿಸಿ ಹೀಗೆ ಹೇಳಬಹುದು. ದೇಹವೇ ಆತ್ಮವಾದರೆ ಇದರಲ್ಲಿ ಚೈತನ್ಯವು ಬಂದದ್ದು ಹೇಗೆ? ಜ್ಞಾನ ಮತ್ತು ಇಚ್ಛೆಗಳು ಜಡ ವಸ್ತುವಿನ ಧರ್ಮಗಳಲ್ಲ. ಪಂಚಭೂತಾತ್ಮಕವಾದ ಈ ದೇಹವು ಜಡವಾದದ್ದು. ದೇಹವೇ ಆತ್ಮವಾದರೆ ಇವನು ಸತ್ತನು ಎನ್ನುವುದು ಯಾವ ಕಾರಣದಿಂದ? ದೇಹವು ಎದುರಿಗೆ ಇದ್ದೇ ಇರುತ್ತದೆ. ಮರಣದಂತೆಯೇ ನಿದ್ರೆ, ಮೂರ್ಛೆಗಳು ಬಂದಾಗ ಜ್ಞಾನೇಚ್ಛೆಗಳು ಏಕೆ ಬರುವುದಿಲ್ಲ? ದೇಹವೇ ಆತ್ಮವಾದರೆ ಆಗಲೂ ಅವು ಇರಲೇಬೇಕಾಗುತ್ತದೆ. ಆದ್ದರಿಂದ ಚೈತನ್ಯವು ದೇಹದ ಧರ್ಮವಲ್ಲ. ನನ್ನ ದೇಹ, ನನ್ನ ದೇಹ ಎಂದು ಮೂಢರು ಸಹ ಹೇಳುತ್ತಾರೆ. ದೇಹವೇ ಆತ್ಮವಾದರೆ ನಾನೇ ದೇಹ ಎಂದು ಹೇಳಬೇಕು. ನನ್ನ ದೇಹ ಎಂದರೆ ಯಾರ ದೇಹ? ಆಗ ನಾನು ಯಾರು? ಜಡವೂ ದೃಶ್ಯವೂ ರೂಪಾದಿಗುಣಯುಕ್ತವೂ ಆದ ದೇಹವು ಎಂದಿಗೂ ಆತ್ಮವಾಗಲಾರದು.

ಇಂದ್ರಿಯಗಳೂ ಆತ್ಮವಲ್ಲ. ಕಿವಿ, ಕಣ್ಣು ಮುಂತಾದವು ಬೇರೆ ಬೇರೆ ಶಬ್ದಾದಿಗುಣಗಳನ್ನು ಗ್ರಹಿಸುವುದಕ್ಕೆ ಸಾಧನಗಳಾದ ಉಪಕರಣಗಳು. ಒಬ್ಬನೇ ಈ ಇಂದ್ರಿಯಗಳಿಂದ ಜ್ಞಾನವನ್ನು ಪಡೆಯುತ್ತಾನೆ ಎಂಬುದು ಅನುಭವಸಿದ್ಧವಾಗಿದೆ. ಇಂದ್ರಿಯಗಳು ಆತ್ಮವಾದರೆ ಯಾವ ಇಂದ್ರಿಯ? ಕಿವಿಯು ಶಬ್ದವನ್ನು ಕೇಳೀತೇ ಹೊರತು ರೂಪವನ್ನು ನೋಡಲಾರದು. ಎಲ್ಲ ಇಂದ್ರಿಯಗಳೂ ತಮ್ಮ ತಮ್ಮ ವಿಷಯವನ್ನು ಮಾತ್ರ ಗ್ರಹಿಸುತ್ತವೆ. ಎಲ್ಲ ಇಂದ್ರಿಯಗಳೂ ಸೇರಿ ಆತ್ಮವೆಂದರೆ ಒಬ್ಬನಲ್ಲಿ ಎಷ್ಟು ಆತ್ಮಗಳು? ಕಿವುಡ, ಕುರುಡ ಮೊದಲಾದವರಿಗೆ ಒಂದೊಂದು ಆತ್ಮವಿಲ್ಲ ಎನ್ನಲಾದಿತೇ? ಬುದ್ಧಿಯ ಪಾಡೂ ಅಷ್ಟೇ. ಅದು ಕ್ಷಣಿಕವಾದದ್ದು. ಅದು ಆತ್ಮನಲ್ಲಿ ಹುಟ್ಟಿ ಆತ್ಮನಲ್ಲಿ ಲಯವಾಗತಕ್ಕದ್ದು. ಇಂದ್ರಿಯಗಳನ್ನು ಪ್ರೇರಿಸತಕ್ಕದ್ದು. ಆತ್ಮನಿಂದ ತಾನೂ ಪ್ರೇರಿತವಾಗಿರುತ್ತದೆ, ಗಾಢನಿದ್ರೆಯಲ್ಲಿ ಬುದ್ಧಿ ಎಲ್ಲಿರುತ್ತದೆ? ಆಗ ಮನುಷ್ಯನು ಸತ್ತು ಹೋಗಿರುತ್ತಾನೆ ಎಂದು ಹೇಳಬಹುದೆ? ಆದ್ದರಿಂದ ಈ ಯಾವ ವಾದಗಳಲ್ಲಿಯೂ ಹುರುಳಿಲ್ಲ. ಆದ್ದರಿಂದ ದೇಹಾದಿಗಳಲ್ಲಿ ಆತ್ಮನೆಂಬ ಅಭಿಮಾನವನ್ನು ತ್ಯಜಿಸಿ **ಸತ್ಯಂ ಜ್ಞಾನಮನಂತಂ ಬ್ರಹ್ಮ** ಎಂದು ವೇದ ಪ್ರತಿಪಾದ್ಯನಾದ ಮಹಾಚೇತನನೇ ಆತ್ಮನೆಂದು ತಿಳಿಯಬೇಕು. ಆತನು ಸರ್ವವ್ಯಾಪಿಯಾದ ವಿಭುವಾದ್ದರಿಂದ ಅವನು ದೇಹದಲ್ಲಿದ್ದಾನೆಂದರೆ ದೇಹವನ್ನು ವ್ಯಾಪಿಸಿ ಕೊಂಡಿದ್ದಾನೆಂದೂ ಜ್ಞಾನಿಗಳಿಗೆ ದೇಹದಲ್ಲಿ ಉಪಲಬ್ಧನಾಗುತ್ತಾನೆಂದೂ ತಿಳಿಯಬೇಕು.

ಆತ್ಮನು ಪರಮಾಣುವಿನಂತೆ ದೇಹದಲ್ಲಿ ಸೂಕ್ಷ್ಮವಾಗಿರುತ್ತಾನೆಂಬುದೂ ಯುಕ್ತವಲ್ಲ. ಆಗ ಕೋಟಿಗಟ್ಟಲೇ ಆತ್ಮರಿದ್ದಾರೆಂದು ಹೇಳಬೇಕಾಗುತ್ತದೆ. ಇದು ಶ್ರುತಿ – ಸ್ಮೃತಿಗಳಿಗೆ ವಿರುದ್ಧವಾದುದು. ಕೆಲವರು ದೇಹದ ಪ್ರಮಾಣದಷ್ಟೇ ಆತ್ಮನ ಪ್ರಮಾಣವಿರುತ್ತದೆಯೆಂದೂ ಅವನು ಮಧ್ಯಮ ಪ್ರಮಾಣದವನೆಂದೂ ಹೇಳುತ್ತಾರೆ. ಆಗ ಬಾಲಕರಲ್ಲಿ ಆತ್ಮನು ಚಿಕ್ಕವನಾಗಿದ್ದು ಬಾಲಕನು ಬೆಳೆದು ದೊಡ್ಡವನಾಗುವಾಗ ಆತ್ಮನೂ ಬೆಳೆಯುತ್ತಾ ದೊಡ್ಡವನಾಗುತ್ತಾನೆಂದೂ ಹೇಳಬೇಕಾಗುತ್ತದೆ. ಜನ್ಮಾಂತರದಲ್ಲಿ ಇರುವೆಯಾಗಿ ಹುಟ್ಟಿದರೆ ಇರುವೆಯ ಪ್ರಮಾಣನಾಗುವುದು ಹೇಗೆ? ಹೀಗಾದಲ್ಲಿ ಜೀವಾತ್ಮಗಳಿಗೆ ಅವಯವಗಳಿವೆಯೆಂದು ವೃದ್ಧಿಹ್ರಾಸಗಳು ಆತ್ಮನಿಗೆ ಉಂಟೆಂದೂ ಹೇಳಬೇಕಾದೀತು. ಆಗ ಆತ್ಮನು ಅನಿತ್ಯನೆಂದೂ ಅವನಿಗೆ ಸಾವು ಇದೆಯೆಂದೂ ಒಪ್ಪಬೇಕಾಗುತ್ತದೆ. ಇವೆಲ್ಲವೂ ಅಸಂಗತವಾದ ಹೇಳಿಕೆಗಳು. ಕೇವಲ ಬಾಲಿಶವಾದವು.

ಈ ಬಗೆಯ ಅಭಿಪ್ರಾಯಗಳು ನಿರಾಧಾರವಾದ ಕಲ್ಪನೆಗಳು. ಮಹಾಮಾಯೆಯ ಪ್ರಭಾವ ಇದು. ದೇಹ ಪ್ರಾಣಾದಿಗಳೆಲ್ಲವೂ ಚೈತನ್ಯ ರಹಿತವಾದ ಜಡ ಪದಾರ್ಥಗಳು. **ಸತ್ಯಂ ಜ್ಞಾನಮನಂತಂ ಬ್ರಹ್ಮ, ಪ್ರಜ್ಞಾನಂ ಬ್ರಹ್ಮ** ಮುಂತಾದ ಶ್ರುತಿ ಪ್ರಾಮಾಣ್ಯದಿಂದ ಆತ್ಮನು ಚೈತನ್ಯದ ಸ್ವರೂಪನೆಂದೂ ಅವನಿಂದಲೇ ಈ ಜಡ ಪದಾರ್ಥಗಳು ಚೈತನ್ಯವನ್ನು ಪಡೆದು ಸ್ವತಃ ಚೇತನಗಳಂತೆ ತೋರುತ್ತವೆಯೆಂದೂ ತಿಳಿಯಬೇಕು.

ದೇಹ, ಇಂದ್ರಿಯ ಮುಂತಾದವು ನಾನು ಎನ್ನಿಸಿಕೊಳ್ಳುವುದಕ್ಕೆ ಅರ್ಹವಾದವುಗಳಲ್ಲ ಎಂದು ಸಿದ್ಧವಾಯಿತು. ಹಾಗಾದರೆ ಯಾವುದನ್ನು ನಾನು ಎನ್ನುತ್ತೇವೆ? ಆತ್ಮ ಚೈತನ್ಯವನ್ನು ನಾನು ಎನ್ನಬಹುದೆ? ಇಲ್ಲೊಂದು ತೊಡಕಿದೆ, ಅವನು, ಅವಳು, ಅದು, ಇದು ಮುಂತಾದ ವಸ್ತುಗಳಿದ್ದಾಗ ಅವುಗಳಿಂದ ವ್ಯಾವರ್ತಿಸಿ ನಾನು ಎನ್ನುತ್ತೇವೆ. ವಿಚಾರ ಮಾಡಿದರೆ ಎಲ್ಲ ಶಬ್ದಗಳೂ ಇತರ ವ್ಯಾವರ್ತಕಗಳು. ಈ ಬಣ್ಣ ಕೆಂಪು ಎನ್ನಬೇಕಾದರೆ ಕಪ್ಪು, ಬಿಳುಪು ಬಣ್ಣಗಳಿರಬೇಕು. ಕೆಂಪು ಶಬ್ದವು ಇತರ ಬಣ್ಣಗಳನ್ನು ವ್ಯಾವರ್ತಿಸುತ್ತದೆ. ಚಿಕ್ಕದು ಎನ್ನಬೇಕಾದರೆ ದೊಡ್ಡದೊಂದು ಇರಬೇಕು. ಬಂಗಾರವು ಹಿತ್ತಾಳೆಯನ್ನು ವ್ಯಾವರ್ತಿಸುತ್ತದೆ. ಹೀಗೆಯೇ ಸರ್ವ ಶಬ್ದಗಳೂ ವ್ಯಾವರ್ತಕಗಳು. ಮರವು ಕಲ್ಲು ಮೊದಲಾದ್ದನ್ನು ವ್ಯಾವರ್ತಿಸುತ್ತದೆ. ಕಲ್ಲು ಶಬ್ದವು ಚಿನ್ನ ಮುಂತಾದದ್ದನ್ನು ವ್ಯಾವರ್ತಿಸುತ್ತದೆ. ಹೊಳೆಯು ಕೆರೆಯನ್ನು ವ್ಯಾವರ್ತಿಸುತ್ತದೆ. ಹೀಗೆಯೇ ನಾನು ಎನ್ನುವುದು ಅನ್ಯವ್ಯಾವರ್ತಕವಾಗಿರುತ್ತದೆ. ಪರಮಾರ್ಥದಲ್ಲಿ ಆತ್ಮಚೈತನ್ಯದ ಹೊರತಾಗಿ ಇನ್ನೊಂದು ವಸ್ತುವೇ ಇಲ್ಲದಾಗ ಅದನ್ನು ನಾನು ಎನ್ನಬಹುದೆ? ಸರ್ವಥಾ ಹಾಗೆ ಹೇಳತಕ್ಕದ್ದಲ್ಲ.

ಈ ಕಾರಣದಿಂದಲೇ **ಅಹಂ ಬ್ರಹ್ಮಾಸ್ಮಿ** ಎಂಬ ವಾಕ್ಯದಲ್ಲಿ ಅಹಂ ಶಬ್ದಕ್ಕೆ ಲಕ್ಷಣಾವೃತ್ತಿಯನ್ನಾಶ್ರಯಿಸಿ ಚೈತನ್ಯ ಎಂಬುದೇ ಲಕ್ಷ್ಯಾರ್ಥವೆಂದು ವೇದಾಂತ ಶಾಸ್ತ್ರವು ತಿಳಿಸಿದೆ. ಬ್ರಹ್ಮ ಶಬ್ದವೂ ಈಶ್ವರ ಎಂಬರ್ಥದಲ್ಲಿರುವುದರಿಂದ ಅಲ್ಲಿಯೂ ಲಕ್ಷಣೆಯಿಂದ ಮಾಯಾ ಸಂಬಂಧವನ್ನು ಕಳಚಿ ಶುದ್ಧ ಚೈತನ್ಯವೆಂದೇ ಅರ್ಥ ಹೇಳಬೇಕು. ಆಗ ಎರಡು ಶಬ್ದಾರ್ಥಗಳೂ ಚೈತನ್ಯವೇ ಆಗುವುದರಿಂದ ಅಭೇದವು ಸಿದ್ಧಿಸುತ್ತದೆ. ಆದ್ದರಿಂದ ದೇಹಾಂತಃಕರಣಗಳಿಂದ ವಿಶಿಷ್ಟವಾದ ಚೈತನ್ಯವನ್ನು ಲೋಕದಲ್ಲಿ ನಾನು ಎಂದು ವ್ಯವಹರಿಸುತ್ತೇವೆ. ಇದೂ ಅಜ್ಞಾನದಿಂದಾದ ವ್ಯವಹಾರವೇ ಸರಿ.

ಯಾರು ಜನ್ಮಾಂತರದಲ್ಲಿ ಮಾಡಿದ ಪುಣ್ಯದಿಂದ ಆತ್ಮ ವಿಚಾರದಲ್ಲಿ ತೊಡಗಿ, ಭಕ್ತಿ ನಿಷ್ಕಾಮ ಕರ್ಮಗಳಿಂದ ಚಿತ್ತ ಶುದ್ಧಿಯನ್ನು ಪಡೆದಿರುತ್ತಾರೋ ಅವರು ಸದ್ಗುರುವಿಗೆ ಶರಣಾಗಿ ತಮ್ಮ ಕಷ್ಟಗಳನ್ನು ನಿವೇದಿಸಿಕೊಳ್ಳುತ್ತಾರೆ. ಆಗ ಶ್ರೀ ದಕ್ಷಿಣಾಮೂರ್ತಿಸ್ವರೂಪನಾದ ಸದ್ಗುರುವು ಶಿಷ್ಯನ ಯೋಗ್ಯತೆಯನ್ನರಿತು ಸನ್ಮಾರ್ಗವನ್ನು ತಿಳಿಸಿಕೊಡುತ್ತಾನೆ. ಬ್ರಹ್ಮೋಪದೇಶಕ್ಕೆ ಶಿಷ್ಯನು ಅರ್ಹನೆಂದು ತಿಳಿದಾಗ ಕಾರುಣ್ಯದಿಂದ "ವತ್ಸ! ಹೆದರಬೇಡ ಆತ್ಮನು ದೂರದಲ್ಲಿಲ್ಲ ನೀನೆ ಪರಮಾತ್ಮನಾಗಿದ್ದೀಯೆ. ಹೆದರಬೇಡ ಎಂದು ಹೇಳಿ ಸತ್ಯವನ್ನು ತಿಳಿಸಿಕೊಡುತ್ತಾನೆ. ಶಿಷ್ಯನ ಎಲ್ಲ ಸಂದೇಹಗಳೂ ದೂರವಾಗಿ ಬಿಡುತ್ತವೆ. ಈ ಪ್ರಕಾರವಾಗಿ ಶಿಷ್ಯನನ್ನು ಉದ್ಧಾರ ಮಾಡುವ ಗುರುಮೂರ್ತಿಯಾದ ಶ್ರೀದಕ್ಷಿಣಾಮೂರ್ತಿಗೆ ನಮಸ್ಕಾರ.

**ರಾಹುಗ್ರಸ್ತದಿವಾಕರೇಂದುಸದೃಶೋ ಮಾಯಾಸಮಾಚ್ಛಾದನಾತ್**
**ಸನ್ಮಾತ್ರಃ ಕರಣೋಪಸಂಹರಣತೋ ಯೋಽಭೂತ್ ಸುಷುಪ್ತಃ ಪುಮಾನ್।**
**ಪ್ರಾಗಸ್ವಾಪ್ಸಮಿತಿ ಪ್ರಬೋಧಸಮಯೇ ಯಃ ಪ್ರತ್ಯಭಿಜ್ಞಾಯತೇ**
**ತಸ್ಮೈ ಶ್ರೀ ಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥ ೬ ॥**

"ಮಾಯೆಯ ಮುಸುಕಿನಿಂದ ಆತ್ಮನು ರಾಹುಗ್ರಹಣ ಹಿಡಿದ ಸೂರ್ಯಚಂದ್ರರಂತಾಗಿ ಆತನ ಇಂದ್ರಿಯಗಳ ಶಕ್ತಿಯೆಲ್ಲವೂ ಉಡುಗಿ ಹೋಗುತ್ತದೆ. ಆಗ ಗಾಢನಿದ್ರೆ ಬಂದು ಬಿಡುತ್ತದೆ. ಇದೇ ಸುಷುಪ್ತಿಯೆಂಬ ಅವಸ್ಥೆ. ಆಗ ಆತ್ಮನು ಸನ್ಮಾತ್ರ ಸ್ವರೂಪನಾಗಿರುತ್ತಾನೆ. ಎಚ್ಚರವಾದ ಮೇಲೆ ಆ ಸಮಯದಲ್ಲಿ ಇಷ್ಟು ಹೊತ್ತು ನಿದ್ರೆ ಮಾಡಿದೆನು ಎಂದು ಆತನು ಗುರುತಿಸಲ್ಪಡುತ್ತಾನೆ. ಈ ಪ್ರಕಾರದಲ್ಲಿರುವ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ನಮಸ್ಕಾರ."

ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳು ಜೀವಾತ್ಮನಿಗೆ ಇವೆ. ಪರಮಾತ್ಮನಿಗೆ ಯಾವ ಅವಸ್ಥೆಯೂ ಇಲ್ಲ. ಅವಸ್ಥಾತ್ರಯವನ್ನು ಅನುಭವಿಸುತ್ತಿರುವ ಜೀವಾತ್ಮನೇ ಪರಮಾರ್ಥವಾಗಿ ಶ್ರೀ ದಕ್ಷಿಣಾಮೂರ್ತಿಯೇ ಆಗಿದ್ದಾನೆ ಎಂದು ಈ ಶ್ಲೋಕದ ತಾತ್ಪರ್ಯ.

ಸ್ವಪ್ನದಲ್ಲಿ ಕಾಣುವ ಜಗತ್ತು ಸ್ವಪ್ನಕ್ಕೆ ಮಾತ್ರ ಸೀಮಿತವಾದದ್ದು. ಅದು ಆತ್ಮನಲ್ಲಿಯೇ ಇದೆಯೇ ಹೊರತು ಹೊರಗಡೆ ಇಲ್ಲ ಎಂದು ಎಲ್ಲರೂ ಬಲ್ಲರು. ಹಾಗೆಯೇ ಜಾಗ್ರತ್ತಿನಲ್ಲಿ ತೋರುವ ಜಗತ್ತು ಸಹ ಆತ್ಮನಲ್ಲಿಯೇ ಇದೆ. ಹೊರಗೆ

ಇಲ್ಲ. ಕನಸಿಗೆ ಜಗತ್ತು ಮಿಥ್ಯೆಯಾದಂತೆ ಜಾಗ್ರತ್ತಿನ ಜಗತ್ತು ಮಿಥ್ಯೆಯಾದದ್ದು. ಕನಸು ಇರುವವರೆಗೂ ಕನಸಿನ ಪ್ರಪಂಚವು ಸತ್ಯವಾಗಿ ತೋರುತ್ತದೆ. ಸುಷುಪ್ತಿಯಿಂದ ಎಚ್ಚರವಾದಾಗ ನಾನು ಸುಖವಾಗಿ ನಿದ್ರಿಸಿದೆನು ಎಂಬ ಅನುಭವದ ಸ್ಮರಣೆ ಬರುತ್ತದೆ. ಆದರೆ ಸುಷುಪ್ತಿಯಲ್ಲಿ ಸುಖವನ್ನು ಅನುಭವಿಸಿದವನು ಯಾರು? ನಿದ್ರೆ ಬಂದಾಗ ಯಾರಿಗೆ ಯಾವುದು ತೋರುತ್ತದೆ? ಆಗಲೂ ಶಾಶ್ವತನಾಗಿರುವ ಜೀವನು ಯಾರು?

ಬೌದ್ಧರು ಎಲ್ಲವೂ ಶೂನ್ಯವೆಂದೂ ಶಾಶ್ವತವಾದದ್ದು ಯಾವುದೂ ಇಲ್ಲವೆಂದೂ ಹೇಳುತ್ತಾರೆ. ಕ್ಷಣಿಕವಾದ ಜ್ಞಾನಗಳ ಸಮುದಾಯವೇ ಆತ್ಮ, ಕ್ಷಣಿಕ ಜ್ಞಾನಕ್ಕೆ ಗೋಚರವಾಗುವ ಕ್ಷಣಿಕ ವಸ್ತುಗಳ ಸಮೂಹವೇ ಜಗತ್ತು ಎಂದು ಅವರು ಹೇಳುತ್ತಾರೆ. ಚಾರ್ವಾಕರು ಜಗತ್ತು ಸತ್ಯವೆಂದೂ ಆತ್ಮನು ಮಾತ್ರ ಇಲ್ಲವೆಂದೂ ವಾದಿಸುತ್ತಾರೆ. ಇದೆಲ್ಲವನ್ನೂ ಖಂಡಿಸಿ ಶಾಶ್ವತನಾದ ಆತ್ಮನಿದ್ದಾನೆಂದು ಸಾಂಖ್ಯಾದಿಸಮಸ್ತದರ್ಶನಗಳೂ ಪ್ರತಿಪಾದಿಸಿವೆ. ಅದು ಬಹು ವಿಸ್ತೃತವಾಗುವುದರಿಂದ ಇಲ್ಲಿ ವಿವರಿಸುವುದು ಶಕ್ಯವಲ್ಲ. ಆತ್ಮನು ಶಾಶ್ವತನೆಂದೂ ಆತನೊಬ್ಬನೇ ಸತ್ಯವೆಂದೂ ಅದ್ವೈತವೇದಾಂತದ ಸಿದ್ಧಾಂತವಾಗಿದೆ.

ಮಾಯೆಯೆನ್ನುವುದು ಪರಮಾತ್ಮನ ಒಂದು ಶಕ್ತಿ ವಿಶೇಷ. ಈ ಮಾಯಾಶಕ್ತಿಯಿಂದ ಜಗತ್ತನ್ನು ಸೃಜಿಸಿ, ಪ್ರಾಣಿದೇಹಗಳನ್ನು ನಿರ್ಮಿಸಿ, ಜೀವಾತ್ಮರ ವೇಷದಿಂದ ದೇಹಗಳಲ್ಲಿ ಸೇರಿಕೊಂಡು, ಮಾಯೆಯ ಮುಸುಕನ್ನು ಹಾಕಿಕೊಂಡಿರುವುದು ಪರಮಾತ್ಮನ ಒಂದು ಲೀಲೆ. ಇನ್ನೇನನ್ನೂ ಹೇಳಲು ಶಕ್ಯವಿಲ್ಲ. ದೇಹದಲ್ಲಿ ಜೀವಾತ್ಮನಾಗಿದ್ದುಕೊಂಡು ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯವನ್ನು ಪಡೆಯುತ್ತಿದ್ದಾನೆ. ವಸ್ತುತಃ ಪರಮಾತ್ಮನಿಗೆ ಯಾವ ಅವಸ್ಥೆಯೂ ಇಲ್ಲ. ಅವಸ್ಥೆಗಳಿರುವಂತೆ ತೋರುವುದು ಹುಸಿತೋರಿಕೆ.

ಮೇಲ್ಕಂಡ ಶ್ಲೋಕದಲ್ಲಿ **ಸುಷುಪ್ತಃ ಪುಮಾನ್** ಆತ್ಮನು ಸುಷುಪ್ತನಾಗಿರುತ್ತಾನೆ ಎಂದು ಹೇಳಿದೆ. ಸುಷುಪ್ತಿಯೆಂದರೆ ಗಾಢನಿದ್ರೆ. ಅದು ಜೀವನಿಗೆ ಸಂಭವಿಸುತ್ತದೆ. ಸುಷುಪ್ತಿಯಲ್ಲಿ ನಮಗೆ ಯಾವುದರ ಅರಿವೂ ಇರುವುದಿಲ್ಲ ಎಂದು ತಿಳಿದಿದ್ದೇವೆ. ಕಲ್ಲಿಗೆ ಯಾವ ಅರಿವೂ ಇರುವುದಿಲ್ಲ. ಅದಕ್ಕೆ ಯಾವಾಗಲೂ ಅರಿವು ಇರುವುದಿಲ್ಲ. ನಮಗಾದರೋ ಗಾಢನಿದ್ರೆಗೆ ಮೊದಲು ಅರಿವು ಇರುತ್ತದೆ. ಎಚ್ಚರವಾದ ಮೇಲೂ ಅರಿವು ಇರುತ್ತದೆ. ಹಾಗಾದರೆ ಇದ್ದ

ಅರಿವು ಸುಷುಪ್ತಿಯಲ್ಲಿ ನಾಶವಾಗಿ, ಅನಂತರ ಅರಿವು ಮತ್ತೆ ಹುಟ್ಟುವುದೇ? ಇದು ಅಸಂಗತ. ಎಚ್ಚರವಾದ ಮೇಲೆ "ನನಗೆ ಯಾವುದೂ ತೋರಲಿಲ್ಲ. ಸುಖವಾಗಿದ್ದೆ" ಎಂಬುದಾದರೂ ಹೇಗೆ ಗೊತ್ತಾಗುತ್ತದೆ? ಸ್ಮರಣೆಯಿಂದ ಗೊತ್ತಾಗುತ್ತದೆ ಎನ್ನಬೇಕು. ಯಾವುದನ್ನು ನಾವು ಮೊದಲು ಅನುಭವಿಸಿರುತ್ತೇವೋ, ತಿಳಿದಿರುತ್ತೇವೋ ಅದು ಮಾತ್ರ ಸ್ಮರಣೆಗೆ ಬರುತ್ತದೆ ಎಂಬುದು ನಿಯಮ. ಯಾವುದರ ಅರಿವು ಮೊದಲು ಆಗಿಲ್ಲವೋ ಅದು ಸ್ಮರಣೆಗೆ ಬರುತ್ತದೆ ಎನ್ನುವುದು ಅಸಂಬದ್ಧ ಪ್ರಲಾಪವಾಗುತ್ತದೆ. ಆದ್ದರಿಂದ ಸುಷುಪ್ತಿ ಕಾಲದಲ್ಲಿಯೂ ಬೆಳಗುವ ಚೈತನ್ಯ ಜ್ಯೋತಿಯೊಂದಿದೆ ಎಂದು ಒಪ್ಪಬೇಕಾಗುತ್ತದೆ.

ಹಾಗಾದರೆ 'ಗಾಢ ನಿದ್ರೆಯಲ್ಲಿ ನಮಗೆ ಏನೂ ತಿಳಿಯಲಿಲ್ಲ. ನಾವು ಕಲ್ಲಿನಂತೆ ಜಡರಾಗಿ ಮಲಗಿದ್ದೆವು' ಎಂದು ಜನರು ಹೇಳುತ್ತಾರಲ್ಲ. ಅದಕ್ಕೆ ಉತ್ತರವೇನು? ಉತ್ತರ ಇದೆ. ಆಗ ಮನಸ್ಸು ಮತ್ತು ಶ್ರೋತ್ರ ಮುಂತಾದ ಇಂದ್ರಿಯಗಳೆಲ್ಲವೂ ನಿಷ್ಕ್ರಿಯವಾಗಿರುತ್ತವೆ. ಅವು ಪರಮಾತ್ಮನಲ್ಲಿ ಸೇರಿ ಹೋಗಿರುತ್ತವೆಯೆಂದು ಪ್ರಶ್ನೋಪನಿಷತ್ತು ಹೇಳುತ್ತದೆ. (ಪ್ರಶ್ನೆ-೪-೨-೮) ಆಗ ಇಂದ್ರಿಯಗಳಿಂದ ಯಾವ ಜ್ಞಾನವೂ ಹುಟ್ಟುವುದಿಲ್ಲ. ಎಚ್ಚರದಲ್ಲಿ ಮನಸ್ಸು ಮತ್ತು ಎಲ್ಲ ಇಂದ್ರಿಯಗಳೂ ಜಾಗೃತವಾಗಿರುತ್ತವೆ. ಮನಸ್ಸು ಮಾತ್ರ ಕನಸಿನಲ್ಲಿ ಜಾಗೃತವಾಗಿದ್ದು ತನಗೆ ತೋರಿದ್ದನ್ನು ಕಲ್ಪಿಸಿಕೊಳ್ಳುತ್ತದೆ. ಮನಸ್ಸಿನ ಮೇಲೆ ನಮ್ಮ ಹತೋಟಿ ಇರುವುದಿಲ್ಲ. ಸುಷುಪ್ತಿಯಲ್ಲಿ ಮನಸ್ಸೂ ಸಹ ನಿಷ್ಕ್ರಿಯವಾಗುತ್ತದೆ. ಚೈತನ್ಯವು ಮಾತ್ರ ತಾನೇ ತಾನಾಗಿ ಬೆಳಗಿಕೊಂಡಿರುತ್ತದೆ. ಈ ಸುಷುಪ್ತಿಯು ಜೀವಾವಸ್ಥೆಯನ್ನು ಮೀರಿದ್ದು. ಆದರೆ ಇದು ಮೋಕ್ಷವಲ್ಲ. ಮೋಕ್ಷವಾಗಿದ್ದರೆ ಮತ್ತೆ ಜಾಗ್ರದವಸ್ಥೆಗೆ ಬಂದು ಸಂಸಾರದಲ್ಲಿ ತೊಳಲಬೇಕಾಗುತ್ತಿರಲಿಲ್ಲ. ಆದ್ದರಿಂದ ಸುಷುಪ್ತಿಯಲ್ಲಿ ಅವಿದ್ಯಾ ಸಂಬಂಧವು ಪೂರ್ತಿಯಾಗಿ ತಪ್ಪಿರುವುದಿಲ್ಲವೆಂದೂ ಪ್ರಾರಬ್ಧಕರ್ಮವು ಸವೆದಿರುವುದಿಲ್ಲವೆಂದೂ ಸಿದ್ಧವಾಗುತ್ತದೆ.

ಆದ್ದರಿಂದಲೇ ಅವಿದ್ಯಾರೂಪವಾದ ಮಾಯೆಯ ಮುಸುಕು ಇರುವುದೆಂದು ಗೊತ್ತಾಗುತ್ತದೆ. ಮನಸ್ಸು ಮತ್ತು ಇಂದ್ರಿಯಗಳ ವ್ಯಾಪಾರವೇನೂ ಇಲ್ಲದ್ದರಿಂದ ಬಾಹ್ಯಪ್ರಪಂಚವೇನೂ ತೋರುವುದಿಲ್ಲ. ಪೂರ್ಣವಾಗಿ ಸೂರ್ಯ ಚಂದ್ರರಿಗೆ ಖಗ್ರಾಸಗ್ರಹಣ ಹಿಡಿದಾಗ ಅವರ ಪ್ರಕಾಶವು ಭೂಮಿಯ ಮೇಲೆ ಸರಿಯಾಗಿ ಹರಡುವುದಿಲ್ಲ. ರಾಹುವು ಭೂಮಿಯ ಛಾಯೆಯೇ (ನೆರಳೇ) ಹೊರತು ವಾಸ್ತವವಾಗಿ ಇರುವ ಗ್ರಹವಲ್ಲ. ಆದ್ದರಿಂದ ರಾಹುವನ್ನು

ಜ್ಯೋತಿಃಶಾಸ್ತ್ರಜ್ಞರು ಛಾಯಾಗ್ರಹವೆಂದು ಹೇಳುತ್ತಾರೆ. ಅಂತೆಯೇ ಮಾಯೆಯು ಪರಬ್ರಹ್ಮದ ಒಂದು ಶಕ್ತಿಯೇ ಹೊರತು ಪ್ರತ್ಯೇಕವಾದ ವಸ್ತುವಲ್ಲ. ಆತ್ಮನು ಸ್ವಯಂಜ್ಯೋತಿಯಾಗಿ ಒಂದೇ ರೀತಿಯಲ್ಲಿ ಪ್ರಕಾಶಿಸುತ್ತಲೇ ಇದ್ದರೂ ಮಾಯೆಯು ರಾಹುವಿನಂತೆ ಅಡ್ಡಬರುವುದರಿಂದ ಆತ್ಮ ಚೈತನ್ಯದ ಪ್ರಕಾಶವು ಇಂದ್ರಿಯಗಳ ಮೇಲೂ ಮನಸ್ಸಿನ ಮೇಲೂ ಸ್ಪಷ್ಟವಾಗಿ ಬೀಳುವುದಿಲ್ಲ. ಜಡವಾದ ಅಂತಃಕರಣವೂ ಇಂದ್ರಿಯಗಳೂ ತಮ್ಮ ಚೈತನ್ಯವನ್ನು ಕಳೆದುಕೊಳ್ಳುವುದರಿಂದ ಆತ್ಮವು ಕಾಣದೇ ನಾನು ಎಂಬ ಪ್ರತೀತಿ ಸಹ ಬರುವುದಿಲ್ಲ. ಮಾಯೆಯಿಂದ ಮೂಢನಾದ ಜೀವನು (ಇಂದ್ರಿಯ ಮನಸ್ಸುಗಳು) ಜಡನಂತೆಯೂ ಕುರುಡನಂತೆಯೂ ಆಗಿಬಿಟ್ಟಿರುತ್ತಾನೆ. ಶುದ್ಧ ಚೈತನ್ಯವು ಮಾತ್ರ ಒಂದೇ ಸಮನಾಗಿ ಪ್ರಕಾಶಿಸುತ್ತಲೇ ಇರುವುದು. ಆನಂದ ಸ್ವರೂಪವಾಗಿಯೇ ಇರುವುದು. ಮಾಯೆಯಿಂದ ಅದರ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ.

ಎಚ್ಚರವಾದ ಮೇಲೆ "ಇಷ್ಟು ಹೊತ್ತು ನಾನು ನಿದ್ರಿಸುತ್ತಿದ್ದೆನು" ಎಂಬ ಅರಿವು ಬರುತ್ತದೆ. "ಆ ಸಮಯದಲ್ಲಿ ನಾನು ಸುಖವಾಗಿದ್ದೆ. ಹೊರಗಿನ ಯಾವ ವಸ್ತುವೂ ತೋರುತ್ತಿರಲಿಲ್ಲ." ಎಂಬುದೂ ಸ್ಮರಣೆಗೆ ಬರುತ್ತದೆ. ಈ ಸ್ಮರಣೆಗೆ ಪ್ರತ್ಯಭಿಜ್ಞೆ ಎಂದು ಹೆಸರು. ಇದು ಸ್ಮರಣೆಯ ಒಂದು ಭೇದ. ಹಿಂದಿನ ಸಂಸ್ಕಾರದಿಂದ ಆಗುವ ಜ್ಞಾನಕ್ಕೆ ಸ್ಮರಣೆಯೆಂದು ಹೆಸರು. ಹಿಂದಿನ ಸಂಸ್ಕಾರ ಮತ್ತು ಇಂದ್ರಿಯದಿಂದಾಗುವ ಸ್ಮರಣೆಗೆ ಪ್ರತ್ಯಭಿಜ್ಞೆಯೆಂದು ಹೆಸರು ಉದಾ: ಕಾಶಿಯಲ್ಲಿ ನಾವು ದೇವದತ್ತ ಎಂಬವನನ್ನು ನೋಡಿ ಪರಿಚಯ ಮಾಡಿಕೊಂಡಿರುತ್ತೇವೆ. ಅದರಿಂದ ಅಂತಃಕರಣದಲ್ಲಿ ಒಂದು ಸಂಸ್ಕಾರ ಉಂಟಾಗಿರುತ್ತದೆ. ಎಷ್ಟೋ ವರ್ಷಗಳ ಮೇಲೆ ಆತನನ್ನು ಮತ್ತೆ ಬೇರೊಂದು ಸ್ಥಳದಲ್ಲಿ ನೋಡುತ್ತೇವೆ. ಆಗ ನಾನು ಕಾಶಿಯಲ್ಲಿ ನೋಡಿದ ದೇವದತ್ತನೇ ಇವನು ಎಂದು ಸ್ಮರಣೆಯಾಗುತ್ತದೆ. ಇದಕ್ಕೆ ಪ್ರತ್ಯಭಿಜ್ಞೆ ಎನ್ನುತ್ತಾರೆ. ಇಲ್ಲಿ ಹಿಂದಿನ ಸಂಸ್ಕಾರವೂ ನೇತ್ರವೆಂಬ ಇಂದ್ರಿಯವೂ ಸೇರಿ ಸ್ಮರಣೆಯಾಗಿದೆ.

ಪ್ರಕೃತ **ಪ್ರಾಗಸ್ವಾಪಸಿಮಿತಿ ಪ್ರಬೋಧ ಸಮಯೇ** ಎಂದು ಹೇಳಿದೆ ಎಚ್ಚರವಾದ ಕಾಲದಲ್ಲಿ "ನಾನು ಹಿಂದೆ ಇದುವರೆಗೆ ನಿದ್ರಿಸುತ್ತಿದ್ದೆನು" ಎಂದು ಸ್ಮೃತಿ ಬರುವುದಷ್ಟೆ. ಆಗ "ಸುಖವಾಗಿದ್ದೆನು" ಎಂಬುದೂ ತಿಳಿದು ಬರುತ್ತದೆ. ನಿದ್ರೆಯಲ್ಲಿ ಸುಖ, ಇತರ ವಸ್ತುಗಳ ಅಭಾವ ಇವು ಅನುಭವಕ್ಕೆ ಬಂದದ್ದರಿಂದ ಅಂತಃಕರಣವು ತನ್ನ ಸುಪ್ತಸ್ಥಿತಿಯನ್ನು ಬಿಟ್ಟು ಉದ್ಬುದ್ಧವಾಗಿರುತ್ತದೆ. ಈ ಸ್ಮರಣೆಗೆ ಬೇರೆ

ಇಂದ್ರಿಯವಾವುದೂ ಬೇಕಾಗಿಲ್ಲ. ಅಂತಃಕರಣ ಉದ್ಬುದ್ಧಸ್ಥಿತಿಯನ್ನವಲಂಬಿಸಿದ್ದರಿಂದ ಬಂದ ಈ ಸ್ಮರಣೆಯನ್ನು ಪ್ರತ್ಯಭಿಜ್ಞೆ ಎಂದಿದ್ದಾರೆ. ಅಂತಃಕರಣವು ಇಂದ್ರಿಯವೆಂದು ವೇದಾಂತಿಗಳ ಮತ ಅಥವಾ ಇದು ಕೇವಲ ಸ್ಮರಣೆ ಎಂದರೂ ಬಾಧೆ ಇಲ್ಲ. **ಪ್ರತ್ಯಭಿಜ್ಞಾಯತೇ** ಎಂದರೆ ಸ್ಮರಿಸಲ್ಪಡುತ್ತಾನೆ ಎಂದಿಷ್ಟೇ ಅರ್ಥ. ಈ ವಿಷಯದಲ್ಲಿ ಮತಭೇದವಿದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದಿದೆ. ಸುಷುಪ್ತಿಯಲ್ಲಿ ಶಬ್ದಸ್ಪರ್ಶಾದಿ ವಿಷಯಗಳಿಲ್ಲವಾದ್ದರಿಂದ ಸುಷುಪ್ತಿಯ ಸುಖವು ಬಾಹ್ಯ ವಸ್ತುವಿನಿಂದ ಆದದ್ದಲ್ಲ. ಆದರೂ ಸುಖವಿದೆಯೆಂದು ಪ್ರತಿಯೊಬ್ಬನೂ ತಿಳಿದಿದ್ದಾನೆ. ಇದರಿಂದ ಆತ್ಮನೇ ಸುಖಸ್ವರೂಪನೆಂದು ನಿಶ್ಚಿತವಾಗುತ್ತದೆ. ಆನಂದ ಸ್ವರೂಪನೇ ಆತ್ಮನಾಗಿದ್ದಾನೆ. ಇದೇ ಸ್ವರೂಪಾನಂದ. ಎಚ್ಚರದಲ್ಲಿ ತಿಂದಾಗ, ನೋಡಿದಾಗ, ಕೇಳಿದಾಗ "ನನಗೆ ಸಂತೋಷವಾಗುತ್ತಿದೆ" ಎಂಬ ಅನುಭವ ಇರುತ್ತದೆ. ಸುಷುಪ್ತಿಯಲ್ಲಿ "ನಾನು ಸುಖವಾಗಿದ್ದೇನೆ" ಎಂಬ ಅನುಭವ ಏಕೆ ಬರುವುದಿಲ್ಲ? ಅನುಭವಿಸದೇ ಇದ್ದದ್ದು ಎಚ್ಚರದಲ್ಲಿ ಸ್ಮರಣೆಗೆ ಬರುವುದು ಹೇಗೆ?

ಇದಕ್ಕೆ ಶಾಸ್ತ್ರಕಾರರು ಹೇಳುವುದೇನೆಂದರೆ ಸುಷುಪ್ತಿಯಲ್ಲಿಯೂ ಅವಿದ್ಯೆ ಮತ್ತು ಅವಿದ್ಯೆಯಿಂದಾದ ಅಂತಃಕರಣವು ಇದ್ದೇ ಇರುತ್ತದೆ. ಅದರ ವೃತ್ತಿಯು (ವ್ಯಾಪಾರವು) ಅತ್ಯಂತ ದುರ್ಬಲವಾದ್ದರಿಂದ ನಾನು ಸುಖವಾಗಿದ್ದೇನೆ ಎಂಬ ಅನುಭವ ಆಗ ಬರುವುದಿಲ್ಲ. ಅನಂತರ ಜಾಗ್ರತ್ತಿಗೆ ಬಂದಾಗ, ಸುಖವನ್ನು ಸೂಕ್ಷ್ಮವಾಗಿ ಗ್ರಹಿಸಿದ ಅಂತಃಕರಣವು ಉದ್ಬುದ್ಧವಾಗುತ್ತದೆ. ಆಗ ಜೀವನು ತಾನು ಸುಖವಾಗಿ ನಿದ್ರಿಸುತ್ತಿದ್ದೆನು ಎಂಬುದನ್ನು ಸ್ಮರಿಸಿಕೊಳ್ಳುತ್ತಾನೆ. ನಿದ್ರೆಯ ಕಾಲದಲ್ಲಿದ್ದ ಸೂಕ್ಷ್ಮವಾದ ಅಂತಃಕರಣ ವೃತ್ತಿಯನ್ನು ಅವಿದ್ಯಾವೃತ್ತಿಯೆಂದೂ ಕರೆಯುವುದುಂಟು. ನಿದ್ರಿಸುತ್ತಿದ್ದೆನು ಎಂಬುದರ ಸ್ಮರಣೆ ಇದೇ ಸಮಾಧಾನ.

ಸುಷುಪ್ತಿಯಲ್ಲಿ **ಏಕೀ ಭವತಿ, ನ ದ್ವಿತೀಯಮಸ್ತಿ** ಇತ್ಯಾದಿ ಶ್ರುತಿ ವಾಕ್ಯಗಳಿರುವುದರಿಂದ, ಆಗ ಅವಿದ್ಯೆಯೂ ಇರುವುದಿಲ್ಲವೆಂದು ಕೆಲವರು ಹೇಳುತ್ತಾರೆ. ಹಾಗಾದರೆ ಆತನು ಮುಕ್ತನಾದನೆಂದೇ ಹೇಳಬೇಕಾಗುತ್ತದೆ. ಮತ್ತೆ ಆತನು ಜಾಗ್ರತ್ತಿಗೆ ಬಂದು ಸಂಸಾರಿಯಾಗುವುದಕ್ಕೆ ಕಾರಣವೇನು? ತಾನು ಅನುಭವಿಸದಿರುವ ಸುಖವನ್ನು ಮನಸ್ಸು ಸ್ಮರಿಸಿಕೊಳ್ಳುವುದು ಹೇಗೆ? ಎಂಬ ಪ್ರಶ್ನೆಗಳಿಗೆ ಉತ್ತರವಿಲ್ಲದೆ ಹೋಗುತ್ತದೆ.

ಇನ್ನೊಂದು ವಿಷಯವನ್ನಿಲ್ಲಿ ಪ್ರಸ್ತಾವಿಸಬಹುದು. **ಪ್ರಬೋಧ ಸಮಯೇ ಯಃ ಪ್ರತ್ಯಭಿಜ್ಞಾಯತೇ** ಎಂದು ಶ್ಲೋಕದಲ್ಲಿದೆ. ಇದು ಕರ್ತರಿ ಪ್ರಯೋಗವಾದರೆ **ಪ್ರತ್ಯಭಿಜಾನಾತಿ** ಎಂದಿರಬೇಕು. ಕರ್ಮಣಿ ಪ್ರಯೋಗವಾದರೆ ಕರ್ತೃ ಯಾರು? ಕರ್ತೃ, ಕರ್ಮ ಎರಡೂ ಆತ್ಮನೇ ಆದ್ದರಿಂದ ಇದು ಕರ್ಮಕರ್ತರಿ ಪ್ರಯೋಗವೆಂದು ಮಾನಸೋಲ್ಲಾಸವೆಂಬ ವ್ಯಾಖ್ಯಾನದಲ್ಲಿ ಬರೆದಿದ್ದಾರೆ.

**ಪ್ರತ್ಯಭಿಜ್ಞಾಯತ ಇತಿ ಪ್ರಯೋಗಃ ಕರ್ಮಕರ್ತರಿ ।**
**ಆತ್ಮಾ ಸ್ವಯಂಪ್ರಕಾಶತ್ವಾಜ್ಞಾನಾತ್ಯಾತ್ಮಾನಮಾತ್ಮನಾ ॥(ವಾರ್ತಿಕ ೨೨)**

ಕರ್ಮಕರ್ತರಿ ಪ್ರಯೋಗವೆಂಬುದು ವ್ಯಾಕರಣ ಶಾಸ್ತ್ರದಲ್ಲುಂಟು. **ಕರ್ಮವತ್ ಕರ್ಮಣಾ ತುಲ್ಯಕ್ರಿಯಃ** ಎಂಬ ಪಾಣಿನಿ ಸೂತ್ರದಿಂದ (೩-೧-೮೭) ಇದನ್ನು ವಿಧಿಸಲಾಗಿದೆ. ಭಿದ್ಯತೇ ಕಾಷ್ಠಂ ಎಂಬುದು ಉದಾಹರಣೆ. ಕಟ್ಟಿಗೆಯು ತನ್ನನ್ನು ತಾನು ಒಡೆದುಕೊಳ್ಳುತ್ತದೆ ಎಂದರ್ಥ. ಕಟ್ಟಿಗೆಯು ಕರ್ಮವೂ ಹೌದು, ಕರ್ತೃವೂ ಹೌದು. ಸುಲಭವಾಗಿ ಕಟ್ಟಿಗೆಯು ಒಡೆದು ಹೋಗುತ್ತದೆ ಎಂದು ತಾತ್ಪರ್ಯ. ಒಡೆದು ಸೀಳಾಗುವುದು ಕ್ರಿಯೆಯಿಂದಾದ ಫಲ. ಅದು ಕರ್ಮವಾದ ಕಟ್ಟಿಗೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಆದ್ದರಿಂದ ಕರ್ಮವದ್ಭಾವ ಬಂದು ಭಿದ್ಯತೇ ಎಂಬ ರೂಪವು ಕ್ರಿಯಾಪದಕ್ಕೆ ಬಂದಿದೆ. ಪ್ರತ್ಯಭಿಜ್ಞಾನದಲ್ಲಾದರೋ ಆತ್ಮನ ಸ್ಮರಣೆಯಿಂದ ಆತ್ಮನಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಆದ್ದರಿಂದ ಇಲ್ಲಿ ಕರ್ಮಕರ್ತರಿ **ಪ್ರತ್ಯಭಿಜ್ಞಾಯತೇ** ಎಂಬ ರೂಪವಾಗುವುದಿಲ್ಲ. ಜ್ಞಾನ, ಸ್ಮರಣೆ, ಹೋಗು - ಮುಂತಾದ ಅರ್ಥವನ್ನು ಕೊಡುವ ಎಲ್ಲಾ ಧಾತುಗಳಿಗೂ ಕರ್ಮವದ್ಭಾವ ಇಲ್ಲ. ಈ ವಿಷಯವು ಸಿದ್ಧಾಂತ ಕೌಮುದಿಯಲ್ಲಿ ವಿವೃತವಾಗಿದೆ. ಆದ್ದರಿಂದ **ಪ್ರತ್ಯಭಿಜ್ಞಾಯತೇ** ಎಂದು ಕರ್ಮಣಿ ಪ್ರಯೋಗವೇ ಹೊರತು ಕರ್ಮಕರ್ತರಿ ಪ್ರಯೋಗವಲ್ಲ. ಹಾಗಾದರೆ ಕರ್ತೃ ಯಾರು? **ಪ್ರಬೋಧಸಮಯೇ** ಎಂದು ಹೇಳಿರುವುದರಿಂದ ಜಾಗ್ರದವಸ್ಥೆಗೆ ಬಂದ ಜೀವಾತ್ಮನೇ ಕರ್ತೃ. ಕರ್ತೃ ಕರ್ಮಗಳಿಗೆ ಔಪಾಧಿಕವಾದ ಭೇದವಿದೆ. ಅಂತಃಕರಣ ವಿಶಿಷ್ಟನಾದ ಜೀವಾತ್ಮನಿಂದ ಯಾವ ಉಪಾಧಿಯೂ ಇಲ್ಲದ ನಿರ್ವಿಶೇಷನಾದ ಪರಮಾತ್ಮನು ಗುರುತಿಸಲ್ಪಡುತ್ತಾನೆ ಎಂದರ್ಥ. ಆದ್ದರಿಂದಲೇ ಮಹಾಕವಿ ಕಾಳಿದಾಸನು

**ಆತ್ಮಾನಮಾತ್ಮನಾ ವೇತ್ಸಿ ಸೃಜಸ್ಯಾತ್ಮಾನಮಾತ್ಮನಾ ।**
**ಆತ್ಮನಾ ಕೃತಿನಾ ಚ ತ್ವಮಾತ್ಮನ್ಯೇವ ಪ್ರಲೀಯಸೇ ॥**

ಎಂದು ಬ್ರಹ್ಮನನ್ನು ಸ್ತುತಿಸಿದ್ದಾನೆ. (ಕುಮಾರ ಸಂಭವ ೨-೧೦) ಇಲ್ಲಿ ಒಬ್ಬನೇ ಆತ್ಮನು ಉಪಾಧಿಭೇದದಿಂದ ಕರ್ತೃ, ಕರ್ಮ, ಕರಣ, ಅಧಿಕರಣಗಳಾಗಿದ್ದಾನೆ.

ತನ್ನ ಸ್ವರೂಪವು ಪರಮಾತ್ಮ ಸ್ವರೂಪವೇ, ಆನಂದ ಸ್ವರೂಪವೇ ಎಂಬುದನ್ನು ಸುಷುಪ್ತಿಯಲ್ಲಿ ಅರಿತುಕೊಂಡ ಜೀವನು ಜಾಗ್ರದವಸ್ಥೆಯಲ್ಲಿ ಗುರುತು ಹಿಡಿದು ತನ್ನನ್ನು ಸ್ಮರಿಸಿಕೊಳ್ಳುತ್ತಾನೆ ಎಂದು ತಾತ್ಪರ್ಯ.

ಇಲ್ಲಿ ವಾದ-ವಿವಾದಗಳು ಶಾಸ್ತ್ರಗ್ರಂಥಗಳಲ್ಲಿ ವಿಸ್ತೃತವಾಗಿ ಬೆಳೆದಿವೆ. ಅವನ್ನು ವಿವರಿಸಲು ಇದು ಸ್ಥಳವಲ್ಲ.

**ಬ್ಯಾಲ್ಯಾದಿಷ್ವಪಿ ಜಾಗ್ರದಾದಿಷು ತಥಾ ಸರ್ವಾಸ್ವವಸ್ಥಾಸ್ವಪಿ**
**ವ್ಯಾವೃತ್ತಾಸ್ವನುವರ್ತಮಾನಮಹಮಿತ್ಯಂತಃ ಸ್ಫುರಂತಂ ಸದಾ ।**
**ಸ್ವಾತ್ಮಾನಂ ಪ್ರಕಟೀಕರೋತಿ ಭಜತಾಂ ಯೋ ಮುದ್ರಯಾ ಭದ್ರಯಾ**
**ತಸ್ಮೈ ಶ್ರೀ ಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥ ೭ ॥**

ಬಾಲ್ಯ, ಯೌವನ, ಮುಪ್ಪು ಹಾಗೆಯೇ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಎಲ್ಲಾ ಅವಸ್ಥೆಗಳೂ ಒಂದಾದ ಮೇಲೆ ಇನ್ನೊಂದರಂತೆ ಸರಿದು ಹೋದರೂ **ನಾನು - ನಾನು** ಎಂಬ ಒಂದು ವಸ್ತು ಎಲ್ಲ ಅವಸ್ಥೆಗಳಲ್ಲಿಯೂ ಏಕಪ್ರಕಾರವಾಗಿ ಅನುವರ್ತಿಸಿಕೊಂಡು ಬರುತ್ತದೆ. ಆ ಏಕಪ್ರಕಾರವಾದ ವಸ್ತುವೇ ನನ್ನ ಸ್ವರೂಪವೆಂದು ಯಾವಾತನು ಮಂಗಳಕರವಾದ ಜ್ಞಾನಮುದ್ರೆಯಿಂದ ಭಕ್ತರಿಗೆ ಬೋಧಿಸುತ್ತಿರುವನೋ ಆ ಶ್ರೀ ದಕ್ಷಿಣಾಮೂರ್ತಿಗೆ ನಮಸ್ಕಾರ.

ಹಿಂದೆ **೫-೬** ನೇ ಶ್ಲೋಕಗಳಲ್ಲಿ ಹೇಳಿದ ವಿಷಯಗಳ ಸಮರ್ಥನೆ ಈ ಸ್ತೋತ್ರದಲ್ಲಿದೆ. **೫** ನೆಯ ಸ್ತೋತ್ರದಲ್ಲಿ ದೇಹೇಂದ್ರಿಯಗಳು ಆತ್ಮನಲ್ಲ ಎಂದು ಹೇಳಿದೆ. ಹಾಗಾದರೆ ಆತ್ಮನೆಂದರೆ ಯಾರು? **ನಾನು - ನಾನು** ಎಂಬ ಜ್ಞಾನಕ್ಕೆ ಯಾವುದು ವಿಷಯವಾಗುತ್ತದೆಯೋ ಅದೇ ಆತ್ಮನೆಂದು ತಿಳಿಯಬೇಕು. ಮಾಂಡೂಕ್ಯೋಪನಿಷತ್ತಿನ ಏಳನೆಯ ಮಂತ್ರದಲ್ಲಿ ಏಕಾತ್ಮಪ್ರತ್ಯಯಸಾರವಾದದ್ದು

ಆತ್ಮ ಎಂದು ಹೇಳಿದೆ. ಸರ್ವತ್ರ ನಾನು ಎಂಬ ಜ್ಞಾನಕ್ಕೆ ವಿಷಯವಾಗುವುದೇ ಆತ್ಮನು ಯಾರೆಂದು ತಿಳಿಯುವುದಕ್ಕೆ ಪ್ರಮಾಣ ಎಂದರ್ಥ. ಬಾಲ್ಯಯೌವನ ಮುಪ್ಪುಗಳಲ್ಲಿ ದೇಹವು ರೂಪಾಂತರವನ್ನು ಪಡೆಯುತ್ತಾ ಹೋಗುವುದರಿಂದ ದೇಹವು ವಿಕಾರಿ. ವಿಕಾರಿಯಾದದ್ದು ಆತ್ಮವಲ್ಲ, ಪ್ರಾಣವೂ ಆತ್ಮವಲ್ಲ. ಪ್ರಾಣಕ್ಕೆ ನಾನು ಎಂಬ ಜ್ಞಾನವಿಲ್ಲ. ನನ್ನ ಪ್ರಾಣವಿರುವವರೆಗೆ ಇಂತಹ ಕೆಲಸಕ್ಕೆ ನಾನು ಒಪ್ಪುವುದಿಲ್ಲ ಎನ್ನುತ್ತೇವೆ. ನನ್ನ ಪ್ರಾಣ ಎಂದು ಹೇಳುವುದರಿಂದಲೇ ನಾನು ಪ್ರಾಣವಲ್ಲ ಎಂದು ಸ್ಪಷ್ಟವಾಗುತ್ತದೆ. ನನ್ನ ಮನೆ ಎಂದಾಗ ಮನೆಯೇ ನಾನಾಗುವುದಿಲ್ಲವಷ್ಟೆ. ಆದ್ದರಿಂದಲೇ ಇಂದ್ರಿಯ, ಮನಸ್ಸು, ಬುದ್ಧಿಗಳೂ ಆತ್ಮವಲ್ಲ. ನನ್ನ ಕಣ್ಣುಗಳಿಂದ ನೋಡುತ್ತೇನೆ. ನನ್ನ ಮನಸ್ಸಿನಲ್ಲಿರುವುದೇ ಬೇರೆ, ನನ್ನ ಬುದ್ಧಿ ಬೇರೊಂದು ನಿಶ್ಚಯವನ್ನು ಮಾಡುತ್ತದೆ ಇತ್ಯಾದಿ ವ್ಯವಹಾರಗಳಿರುವುದರಿಂದ ಇಂದ್ರಿಯಾದಿಗಳು ನಾನು ಎಂಬುದಕ್ಕೆ ಸಂಬಂಧಿಸಿದವೇ ಹೊರತು ನಾನೇ ಆಗುವುದಿಲ್ಲ. ಮನೋಬುದ್ಧಿಗಳು ಚಂಚಲವಾದವು. ಪ್ರತಿನಿಮಿಷದಲ್ಲಿಯೂ ನಾನಾ ಮಾರ್ಪಾಡುಗಳನ್ನು ಪಡೆಯುತ್ತವೆಯಾದ್ದರಿಂದ ಅವುಗಳಲ್ಲಿ ಯಾವುದೂ ಕೂಟಸ್ಥನಾದ ಆತ್ಮನಾಗುವುದಿಲ್ಲ. ಹಾಗಾದರೆ ದೇಹವೇ ನಾನು, ಪ್ರಾಣವೇ ನಾನು ಈ ಪ್ರಕಾರ ಕೆಲವರು ಭಾವಿಸಿರುವುದಕ್ಕೆ ಕಾರಣವೇನು ಎಂಬ ಪ್ರಶ್ನೆ ಹುಟ್ಟುತ್ತದೆ. ಸರಿಯಾದ ವಿಚಾರ ಮಾಡದೇ ಇರುವುದೇ ಇದಕ್ಕೆ ಕಾರಣವೆನ್ನಬಹುದು. ಅಂಧಗಜನ್ಯಾಯದಂತೆ ಕುರುಡರು ಆನೆಯನ್ನು ಮುಟ್ಟಿನೋಡಿ ಅದು ಹೇಗಿದೆ ಎಂದು ತಿಳಿದುಕೊಂಡ ಹಾಗಾಗಿದೆ. ಜನರು ಆನೆಯನ್ನು ವಿಶೇಷವಾಗಿ ವರ್ಣಿಸುತ್ತಿದ್ದುದರಿಂದ ಆನೆ ಹೇಗಿರುತ್ತದೆ ಎಂದು ತಿಳಿಯಲು ಕೆಲವು ಕುರುಡರು ಅಪೇಕ್ಷಿಸಿದರು. ಅವರ ಕೋರಿಕೆಯಂತೆ ಒಬ್ಬನು ಆನೆಯನ್ನು ಎದುರಿಗೆ ತಂದು ನಿಲ್ಲಿಸಿದ. ಒಬ್ಬ ಕುರುಡನು ಆನೆಯ ಸೊಂಡಿಲನ್ನು ಮುಟ್ಟಿನೋಡಿ ಆನೆಯು ಉದ್ದವಾದ ಹಗ್ಗದಂತೆ ಇದೆಯೆಂದು ತಿಳಿದುಕೊಂಡನು. ಇನ್ನೊಬ್ಬನು ಆನೆಯ ಕಾಲನ್ನು ಮತ್ತೊಬ್ಬನು ಅದರ ಬಾಲವನ್ನು ಇನ್ನೊಬ್ಬನು ಆನೆಯ ಮೈಯನ್ನು ಮುಟ್ಟಿ ತಡವರಿಸಿ ಆನೆಯು ಹೇಗಿರುತ್ತದೆ ಎಂಬುದನ್ನು ನಿಶ್ಚಯಸಿಕೊಂಡರಂತೆ. ಹಾಗಾಗಿದೆ ಲೋಕದಲ್ಲಿ ಅಜ್ಞಾನಿಗಳ ಪರಿಸ್ಥಿತಿ. ನಾನು ಕಪ್ಪಾಗಿದ್ದೇನೆ, ದಪ್ಪವಾಗಿದ್ದೇನೆ, ತೆಳ್ಳಗಾಗಿದ್ದೇನೆ ಎಂದು ಹೇಳುತ್ತೇವಷ್ಟೆ. ಇದರಿಂದ ದೇಹವೇ ನಾನು ಆಗಿದೆಯೆಂದೂ ಅದೇ ಆತ್ಮವೆಂದೂ ಅವರ ಅಭಿಪ್ರಾಯವಾಗಿದೆ. ಪ್ರಾಣವು ಹೋದ ಮೇಲೆ ನಾನು ಎಂಬ ಭಾಗವೇ ಅಳಿಸಿ ಹೋಗುವ ಕಾರಣದಿಂದ ಪ್ರಾಣವು ಆತ್ಮವೆಂದು ಕೆಲವರ ಅಭಿಪ್ರಾಯ. ನಾನು ನೋಡುತ್ತೇನೆ, ಕೇಳುತ್ತೇನೆ ಇತ್ಯಾದಿ ವ್ಯವಹಾರದಿಂದ ಇಂದ್ರಿಯವು ಆತ್ಮವೆಂದೂ, ನಾನು ಹೀಗೆ

ಆಲೋಚಿಸುತ್ತೇನೆ, ಹೀಗೆ ನಿಶ್ಚಯಿಸುತ್ತೇನೆ ಎಂಬ ವ್ಯವಹಾರದಿಂದ ಮನೋಬುದ್ಧಿಗಳು ಆತ್ಮವೆಂದೂ ಜನರು ಭ್ರಾಂತರಾಗಿದ್ದಾರೆ. ಶೂನ್ಯವು ಆತ್ಮವೆನ್ನತಕ್ಕವರು ಮಾಧ್ಯಮಿಕರಾದ ಬೌದ್ಧರು. ಅವರದ್ದು ಬರಿಯ ತರ್ಕ. ಅವರಲ್ಲಿಯೂ ಮತಭೇದಗಳಿವೆ. ಶೂನ್ಯವು ಸತ್ ಅಲ್ಲ. ಅಸತ್ತಲ್ಲ – ಹೀಗೆ ನಾನಾ ರೀತಿಯಲ್ಲಿ ಶೂನ್ಯ ಸ್ವರೂಪವನ್ನು ಹೇಳುತ್ತಾರೆ. ಅದೆಲ್ಲವೂ ವೇದ ವಿರುದ್ಧವಾದ ಸಿದ್ಧಾಂತವಾದ್ದರಿಂದ ಅವರ ಹೇಳಿಕೆ ತಪ್ಪು. ಇದು ವಿಸ್ತೃತವಾಗುವುದರಿಂದ ಇಲ್ಲಿ ವಿವರಿಸಿಲ್ಲ.

ಹಾಗೆಯೇ ಜನರು ಜಾಗ್ರತ್, ಸ್ವಪ್ನ, ಸುಷುಪ್ತಿಗಳನ್ನು ಅನುಭವಿಸುತ್ತಾರೆ. ಈ ಮೂರು ಅವಸ್ಥೆಗಳು ಹಿಂದಿನ ಬಾಲ್ಯಾದಿ ಅವಸ್ಥೆಗಳಿಗಿಂತ ಭಿನ್ನವಾದವು. ಬಾಲ್ಯಾದಿ ಅವಸ್ಥೆಗಳು ಎಚ್ಚರವಾದಾಗಲೇ ನಮಗೆ ಗೋಚರಿಸುತ್ತವೆ. ಆದರೆ ಎಚ್ಚರ, ಕನಸು, ನಿದ್ರೆ ಇವು ಆಯಾ ಅವಸ್ಥೆಗಳಿಗೆ ಕಟ್ಟು ಬಿದ್ದಿರುತ್ತವೆ. ಎಚ್ಚರವೆಂಬ ಜಾಗ್ರದವಸ್ಥೆಯಲ್ಲಿ ಕನಸು ನಿದ್ರೆಗಳಿಲ್ಲ. ಸುಷುಪ್ತಿಯಲ್ಲಿ ಎಚ್ಚರ ಕನಸುಗಳಿಲ್ಲ. ಈ ಮೂರು ಅವಸ್ಥೆಗಳು ಬಾಲ್ಯವೇ ಮುಂತಾದ ಎಲ್ಲ ಅವಸ್ಥೆಗಳಲ್ಲಿಯೂ ಇರುತ್ತವೆ. ಜಾಗ್ರತ್ತಿನಲ್ಲಿ ಕಾಣುವ ಎಲ್ಲ ವಸ್ತುಗಳೂ ಸ್ವಪ್ನದಲ್ಲಿಯೂ ಕಾಣುತ್ತವೆ. ಆದರೆ ಅವು ವಿಕೃತವಾಗಿ ಕಾಣಬಹುದು. ಸತ್ತವನು ಬದುಕಿರುವಂತೆ ಬದುಕಿರುವವನು ಸತ್ತಂತೆ ಕಾಣಬಹುದು ಕಾಣುವ ವಸ್ತುಗಳೆಲ್ಲವೂ ಮನಸ್ಸಿಗೆ ಗೋಚರಿಸುತ್ತವೆಯೇ ಹೊರತು ಕಣ್ಣು ಮುಂತಾದ ಇಂದ್ರಿಯಗಳಿಗಲ್ಲ. ಆಗ ಮನಸ್ಸಿನ ಹೊರತು ಉಳಿದ ಇಂದ್ರಿಯಗಳೆಲ್ಲವೂ ಸುಪ್ತವಾಗಿರುತ್ತವೆ. ಆದರೆ ಆತ್ಮವು ಮಾತ್ರ ನಾನು – ನಾನು ಎಂದುಕೊಳ್ಳುತ್ತಾ ಒಂದೇ ಪ್ರಕಾರವಾಗಿರುತ್ತದೆ. ಈ ಆತ್ಮನಿಗೆ ಸ್ವತಃ ಜಾಗ್ರತ್ ಸ್ವಪ್ನಗಳೆರಡೂ ಇಲ್ಲ. ಸುಷುಪ್ತಿಯಲ್ಲಿಯೂ ಆತ್ಮವು ಇದ್ದೇ ಇರುತ್ತದೆ. ಆದ್ದರಿಂದಲೇ ನಾನು ಸುಖವಾಗಿ ನಿದ್ರಿಸಿದೆನು ಎಂಬ ಅನುಭವ ಎಲ್ಲರಿಗೂ ಬರುತ್ತದೆ. ಸುಖವನ್ನು ಅನುಭವಿಸುವಾಗ ಆತ್ಮವು ಇರಲೇಬೇಕಷ್ಟೆ. ಆದ್ದರಿಂದಲೇ ನಿದ್ರೆ ಕಳೆದ ಮೇಲೆ ನಾನು ಜಾಗ್ರತ್, ಸ್ವಪ್ನ ಸುಷುಪ್ತಿಗಳನ್ನು ಅನುಭವಿಸತಕ್ಕವನು ಎಂಬ ಅರಿವು ಬರುತ್ತದೆ. ಗಾಢ ನಿದ್ರೆಯಲ್ಲಿ ಎಲ್ಲ ಇಂದ್ರಿಯಗಳೂ ಅವುಗಳ ವಿಷಯಗಳೂ ಆತ್ಮನಲ್ಲಿ ಸೇರಿ ಹೋಗಿರುತ್ತವೆಯೆಂದು ಪ್ರಶ್ನೋಪನಿಷತ್ತು ತಿಳಿಸುತ್ತದೆ. ಅವು ಆತ್ಮನಿಗೆ ಸಂಬಂಧಿಸಿ ಹೊರಗಡೆ ಕಾರ್ಯಪ್ರವೃತ್ತವಾದಾಗ ಎಲ್ಲ ವಿಷಯಗಳೂ ತೋರಬಹುದು. ಕಾರ್ಯಪ್ರವೃತ್ತಿಯೇ ಇಲ್ಲದಿರುವಾಗ ಯಾವ ಬಾಹ್ಯ ವಸ್ತುವಿನ ಅರಿವೂ ಇರುವುದಿಲ್ಲ. ಅವೆಲ್ಲವೂ ಆತ್ಮನಲ್ಲಿಯೇ ಅಡಗಿಹೋಗಿರುವುದರಿಂದ ಆತ್ಮನು ಇದ್ದೇ ಇರಬೇಕು. ನಾನು ಗಾಢನಿದ್ರೆಯನ್ನು

ಅನುಭವಿಸಿದೆನು ಎಂಬ ಸ್ಮರಣೆಯಿಂದಲೂ ಆಗ ಇಂದ್ರಿಯಗಳನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡಿರುವುದರಿಂದಲೂ ನಾನು ಎಂಬ ಆತ್ಮನು ಇದ್ದಾನೆಂದು ದೃಢವಾಗುತ್ತದೆ. ಹೀಗೆ ಬಾಲ್ಯಾದ್ಯವಸ್ಥೆಗಳೂ ಜಾಗ್ರದಾದ್ಯವಸ್ಥೆಗಳೂ ಬಂದು ಹೊರಟು ಹೋದರೂ ನಾನು – ನಾನು ಎಂದುಕೊಳ್ಳುವ ಆತ್ಮನು ಏಕ ಪ್ರಕಾರದಲ್ಲಿ ಇರುತ್ತಾನೆ ಎಂದು ದೃಢವಾದ ನಂಬಿಕೆ ಇರಬೇಕು.

ಆಗ ಯಾವ ವಿಕಾರವೂ ಆತನಿಗಿಲ್ಲವಾದ್ದರಿಂದ ಆಕಾಶದಂತೆ ತಟಸ್ಥನಾಗಿ ಬಾಹ್ಯಸ್ಪರ್ಶವಿಲ್ಲದೆ ಇರತಕ್ಕವನೇ ಆತ್ಮನೆಂದು ನಿಶ್ಚಯಿಸಬಹುದು.

ಮಂಗಳಕರವೆಂದು ಜ್ಞಾನಮುದ್ರೆಯಿಂದ ಈ ವಿಷಯವನ್ನು ಗುರುವಾದ ದಕ್ಷಿಣಾಮೂರ್ತಿಯು ಶಿಷ್ಯರಿಗೆ ಬೋಧಿಸುತ್ತಾನೆ. ಜ್ಞಾನಮುದ್ರೆಯನ್ನು ಚಿನ್ಮುದ್ರೆಯೆಂದು ಹೇಳುವುದುಂಟು. ಈ ಮುದ್ರೆಯ ಸ್ವರೂಪ ಹೀಗೆ – ಬಲಗೈಯನ್ನು ಸ್ವಲ್ಪ ಎತ್ತಿ ಹಿಡಿದಿರಬೇಕು. ಹಸ್ತದಲ್ಲಿ ಐದು ಬೆರಳುಗಳಿವೆಯಷ್ಟೆ. ತರ್ಜನೀ ಬೆರಳಿನ ತುದಿಯನ್ನು ಅಂಗುಷ್ಠ ಬೆರಳಿನ ತುದಿಗೆ ಮುಟ್ಟಿಸಬೇಕು. ಉಳಿದ ಮೂರು ಬೆರಳುಗಳನ್ನು ಬಗ್ಗಿಸದೆ ನಿಲ್ಲಿಸಿರಬೇಕು. ಇದು ಜ್ಞಾನಮುದ್ರೆ. ಹೇಗೆಂದರೆ, ಅಂಗುಷ್ಠವು ಪರಮಾತ್ಮನನ್ನೂ ತರ್ಜನಿಯು ಜೀವಾತ್ಮನನ್ನೂ ಸೂಚಿಸುತ್ತದೆ. ಉಳಿದ ಮೂರು ಬೆರಳುಗಳು ಬಾಲ್ಯ, ಯೌವನ, ವೃದ್ಧಾವಸ್ಥೆಗಳನ್ನೂ, ಜಾಗ್ರತ್ ಸ್ವಪ್ನ, ಸುಷುಪ್ತಿಗಳನ್ನೂ ಸೂಚಿಸುತ್ತವೆ. ತರ್ಜನಿಯು ಆ ಬೆರಳುಗಳ ಸಾಲಿನಲ್ಲಿ ಜೊತೆಯಾಗಿ ನಿಂತು ಆ ಮೂರು ಮೂರು ಅವಸ್ಥೆಗಳೂ ತನಗಿವೆಯೆಂದು ಭ್ರಾಂತನಾದ ಜೀವಾತ್ಮನನ್ನು ಪ್ರತಿನಿಧಿಸುತ್ತದೆ. ಗುರುವಿನ ಉಪದೇಶದಿಂದ ಆ ಅವಸ್ಥೆಗಳಲ್ಲಿ ಒಂದೂ ತನಗಿಲ್ಲವೆಂದು ತಿಳಿದು ತಾನೇ ಪರಮಾತ್ಮನೆಂದು ನಿಶ್ಚಯಿಸಿದಾಗ ಆ ಮೂರು ಬೆರಳುಗಳನ್ನೂ ತ್ಯಜಿಸಿ ಪರಮಾತ್ಮನೊಡನೆ ಸೇರಿ ಹೋಗುತ್ತದೆ! ತರ್ಜನಿಯು ಅಂಗುಷ್ಠವನ್ನು ಮುಟ್ಟಿಕೊಂಡದ್ದರ ಅಭಿಪ್ರಾಯ ಇದು ! ಆ ಮೂರು ಬೆರಳುಗಳು ಮೇಲ್ಕಂಡ ಅವಸ್ಥೆಗಳಲ್ಲದೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳನ್ನೂ ಸೂಚಿಸುತ್ತವೆ ಎಂದೂ ಹೇಳಬಹುದು. ಸ್ಥೂಲ ಶರೀರ = ಕಣ್ಣಿಗೆ ಕಾಣುವ ದೇಹ, ಸೂಕ್ಷ್ಮ ಶರೀರ = ಅಂತಃಕರಣ. ಕಾರಣ ಶರೀರ = ಅವಿದ್ಯೆ.

ಆರನೆಯ ಸ್ತೋತ್ರದಲ್ಲಿ **ಪ್ರಬೋಧ ಸಮಯೇ ಯಃ ಪ್ರತ್ಯಭಿಜ್ಞಾಯತೇ** ಎಂದು ಹೇಳಿದೆಯಷ್ಟೆ. ಜಾಗ್ರತ್ ಮುಂತಾದ ಮೂರು ಅವಸ್ಥೆಗಳೂ

ತನಗಿವೆಯೆಂದೂ ಹಿಂದೆ ನಿದ್ರಿಸುತ್ತಿದ್ದೆನು ಎಂದು ಎಚ್ಚರವಾದೊಡನೆ ಗುರುತಿಸಲ್ಪಡುವ ಚೈತನ್ಯವೇ ತಾನೆಂದೂ ಪ್ರತ್ಯಭಿಜ್ಞೆಯಿಂದ ಗೊತ್ತಾಗುವುದು ಎಂದು ಹೇಳಿದೆ. ಇಲ್ಲಿ ಒಂದು ಶಂಕೆ ಹುಟ್ಟುತ್ತದೆ. ಪ್ರತ್ಯಭಿಜ್ಞೆಯು ಒಂದು ಪ್ರಮಾಣವಾಗುವುದೆ ? ಪ್ರತ್ಯಕ್ಷ, ಅನುಮಾನ, ಶಬ್ದ – ಮುಂತಾದ ಪ್ರಮಾಣಗಳಲ್ಲಿ ಪ್ರತ್ಯಭಿಜ್ಞೆಯೂ ಪ್ರಮಾಣವೆಂದು ಯಾವ ಶಾಸ್ತ್ರಕಾರರೂ ಹೇಳಿಲ್ಲ. ಪ್ರತ್ಯಭಿಜ್ಞೆಯೆಂದರೆ ಹಿಂದೆ ಎಲ್ಲಿಯೋ ಕಂಡ ಒಂದು ವಸ್ತುವು ಸ್ವಲ್ಪ ರೂಪಾಂತರವನ್ನು ಹೊಂದಿ ಈಗ ಪುನಃ ಕಂಡಾಗ ಅದೇ ಇದು ಎಂದು ಗುರುತಿಸುವುದು. ಇದು ಸ್ಮರಣೆಯ ಒಂದು ಭೇದ.

ಸ್ಮರಣೆಯು ಹಿಂದಿನ ಸಂಸ್ಕಾರದಿಂದ ಉಂಟಾಗುತ್ತದೆ. ಒಂದು ವಸ್ತುವನ್ನು ನೋಡಿಯೋ ತಿಂದೋ ನಮ್ಮಲ್ಲಿ ಒಂದು ಸಂಸ್ಕಾರ ಉಂಟಾಗಿರುತ್ತದೆ. ಆ ಸಂಸ್ಕಾರ ಬಲದಿಂದ ಪುನಃ ಎಲ್ಲಿಯೋ ಆ ವಸ್ತುವನ್ನು ನೋಡಿದಾಗ ಹಿಂದೆ ನೋಡಿದ, ಅನುಭವಿಸಿದ ವಿಷಯದ ಸ್ಮರಣೆಯಾಗುತ್ತದೆ. ಕಾಶಿಯಲ್ಲಿ ಒಬ್ಬ ಮನುಷ್ಯನನ್ನು ನೋಡಿ ಮಾತಾಡಿದ್ದರಿಂದ ನಮ್ಮಲ್ಲಿ ಒಂದು ಸಂಸ್ಕಾರವಾಗಿರುತ್ತದೆ. ಒಂದೆರಡು ವರ್ಷಗಳ ಮೇಲೆ ಪುನಃ ಬೆಂಗಳೂರಲ್ಲಿ ಆತನನ್ನು ಕಂಡಾಗ ಓ ಕಾಶಿಯಲ್ಲಿ ನಾನು ಕಂಡು ಮಾತಾಡಿದವನೇ ಈತ ಎಂಬ ಸ್ಮರಣೆ ಬರುತ್ತದೆ. ಆ ಮನುಷ್ಯನ ವೇಷಭೂಷಣಗಳು ಬದಲಾಯಿಸಿದ್ದರೂ ಸ್ಮೃತಿ ಬರುತ್ತದೆ. ಇದೇ ಪ್ರತ್ಯಭಿಜ್ಞೆ. ಹಸು ಕರುವನ್ನು ಹಾಕಿದ ಮೇಲೆ ಕರು ಸ್ವಲ್ಪ ಹೊತ್ತಿನಲ್ಲಿ ಎದ್ದು ನಿಂತು ತಾಯಿಯ ಮೊಲೆಯನ್ನು ಚೀಪತೊಡಗುತ್ತದೆ. ತಾಯಿಯ ಕೆಚ್ಚಲಿನಲ್ಲಿ ಹಾಲು ಇದೆಯೆಂದೂ ಅದನ್ನು ಕುಡಿದರೆ ತನ್ನ ಹಸಿವು ಹೋಗುವುದೆಂದೂ ಕರುವಿಗೆ ಹೇಗೆ ಗೊತ್ತಾಗುತ್ತದೆ? ಹಿಂದಿನ ಜನ್ಮದಲ್ಲಿ ಹಾಗೆ ಹಾಲನ್ನು ಕುಡಿದದ್ದರಿಂದ ಉಂಟಾದ ಸಂಸ್ಕಾರ ಬಲದಿಂದಲೇ ಕರುವಿಗೆ ಗೊತ್ತಾಗುತ್ತದೆಯೆಂದು ಹೇಳಲೇಬೇಕು. ಬೇರೆ ದಾರಿಯಿಲ್ಲ. ಹಾಗೆಯೇ ವಿವೇಕಿಯಾದ ಮನುಷ್ಯನು ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಆದ ಸಂಸ್ಕಾರ ಬಲದಿಂದ ಎಚ್ಚರವಾದೊಡನೆ ಆತನೇ ನಾನು ಎಂದು ಪ್ರತ್ಯಭಿಜ್ಞೆಯಿಂದ ತಿಳಿದುಕೊಳ್ಳುತ್ತಾನೆ. ಅಂತೆಯೇ ಬಾಲ್ಯಾದ್ಯವಸ್ಥೆಗಳನ್ನು ಅನುಭವಿಸಿದವನು ನಾನು ಎಂದು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಆಗ ಮಾಯೆಯಿಂದಾದ ಅಜ್ಞಾನದಿಂದ ಅಲ್ಪಜ್ಞನಾಗಿದ್ದೆ. ಈಗ ಗುರೂಪದೇಶದಿಂದ ಅಜ್ಞಾನವು ತೊಲಗಿತು ಜಾಗ್ರದಾದ್ಯವಸ್ಥೆಗಳೂ ಬಾಲ್ಯಾದಿಗಳೂ ನನಗೆ ತೋರುತ್ತಿದ್ದುದು ಅಜ್ಞಾನದಿಂದ. ಅವು ಯಾವುವೂ ನನಗಿಲ್ಲ. ನಾನು ಸ್ವತಃ ಪರಮಾತ್ಮನೇ ಆಗಿದ್ದೇನೆ ಎಂದು ಪ್ರತ್ಯಭಿಜ್ಞಾನವನ್ನು

ಪಡೆಯಬಹುದು. ಪುರಾಣಗಳೂ ಧರ್ಮಶಾಸ್ತ್ರಗಳೂ ಈ ರೀತಿಯಲ್ಲಿ ಪ್ರತ್ಯಭಿಜ್ಞೆ ಐತಿಹ್ಯ ಮುಂತಾದವುಗಳಿಂದಲೂ ಸಮ್ಯಗ್ ಜ್ಞಾನವನ್ನು ಪಡೆಯಬಹುದೆಂದು ಹೇಳಿವೆ. ಆದ್ದರಿಂದ ೭ ನೆಯ ಸ್ತೋತ್ರದಲ್ಲಿ ಹೇಳಿದಂತೆ ಪ್ರತ್ಯಭಿಜ್ಞೆಯಿಂದ ನಾನು ಪರಮಾತ್ಮನೇ ಎಂಬ ಜ್ಞಾನವನ್ನು ಪಡೆಯುತ್ತಾನೆ ಎಂಬುದು ಸಮಂಜಸವಾಗಿದೆ.

**ವಿಶ್ವಂ ಪಶ್ಯತಿ ಕಾರ್ಯಕಾರಣತಯಾ ಸ್ವಸ್ವಾಮಿ ಸಂಬಂಧತಃ**
**ಶಿಷ್ಯಾಚಾರ್ಯತಯಾ ತಥೈವ ಪಿತೃಮಾತ್ರಾದ್ಯಾತ್ಮನಾ ಭೇದತಃ ।**
**ಸ್ವಪ್ನೇ ಜಾಗ್ರತಿ ವಾ ಯ ಏಷ ಪುರುಷೋ ಮಾಯಾಪರಿಭ್ರಾಮಿತಃ**
**ತಸ್ಮೈ ಶ್ರೀ ಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ । ೮ ।**

ಯಾವ ಪುರುಷನು ಈ ಜಗತ್ತು ಕಾರ್ಯಕಾರಣಭಾವಯುಕ್ತವಾದದ್ದು, ನಾನು, ನನ್ನ ಸ್ವಾಮಿ ಎಂಬ ಸಂಬಂಧವುಳ್ಳದ್ದು. ನಾನು ಶಿಷ್ಯ, ಆತನು ಆಚಾರ್ಯ ಎಂಬ ಕಲ್ಪನೆಯುಳ್ಳದ್ದು, ಈತನು ತಂದೆ, ಅವಳು ತಾಯಿ ಎಂಬ ಭಾವನೆಯುಳ್ಳದ್ದು ಎಂಬುದಾಗಿ ಜಾಗ್ರತ್ತಿನಲ್ಲಾಗಲಿ, ಸ್ವಪ್ನದಲ್ಲಾಗಲಿ ಕಾಣುತ್ತಿರುವನೋ ಅದಕ್ಕೆ ಕಾರಣವಾಗಿ ಮಾಯೆಯಿಂದ ಭ್ರಾಂತನಾಗಿರುವನೋ ಆ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ಇದೋ ನಮಸ್ಕಾರ.

ಶ್ಲೋಕದಲ್ಲಿ **ಪಿತೃಮಾತ್ರಾದ್ಯಾತ್ಮನಾ** ಎಂಬಲ್ಲಿ **ಪಿತೃಪುತ್ರಾದ್ಯಾತ್ಮನಾ** ಎಂಬ ಪಾಠಾಂತರವಿದೆ. ಆಗ ತಂದೆ ಮಗ ಎಂಬ ಭೇದವನ್ನು ಎಂದು ಅರ್ಥ ಮಾಡಿಕೊಳ್ಳಬೇಕು.

ನಮಗೆ ಕಾಣುವ ಈ ವಿಶ್ವವು ಅತ್ಯಂತ ವಿಚಿತ್ರವಾಗಿದೆ. ಹಲವಾರು ವಸ್ತುಗಳು, ನಾನಾ ಬಗೆಯ ವ್ಯಕ್ತಿಗಳು ಇಲ್ಲಿ ಕಾಣಿಸುತ್ತಾರೆ. ಇದು ಜಾಗ್ರದವಸ್ಥೆಯಲ್ಲಿ ಮಾತ್ರವಲ್ಲ. ಸ್ವಪ್ನದಲ್ಲಿಯೂ ಸಹ ಇದೇ ಬಗೆಯ ವಿಚಿತ್ರವಾದ ಜಗತ್ತು ಕಾಣುತ್ತದೆ. ಹೀಗಿರುವಾಗ ಅದ್ವೈತ ಸಿದ್ಧಾಂತವೆಂಬುದಕ್ಕೆ ಆಧಾರವೇ ಇಲ್ಲವೆನಿಸುತ್ತದೆ. ಶಾಸ್ತ್ರದಲ್ಲಿ ಪ್ರಮಾಣವಾಕ್ಯವು ಇದ್ದರೂ ಸಹ ಲೋಕದಲ್ಲಿ ದ್ವೈತವೇ ನಮ್ಮ ಅನುಭವಕ್ಕೆ ಬರುತ್ತಿದೆ. ಪ್ರತ್ಯಕ್ಷವಾದ ದ್ವೈತವನ್ನು ಅಲ್ಲಗಳೆದು ಈ ಶಾಸ್ತ್ರವಾಕ್ಯವನ್ನು ನಂಬುವುದಾದರೂ ಹೇಗೆ? ಎಂಬ ಶಂಕೆ ಪ್ರತಿಯೊಬ್ಬನಿಗೂ ಬಂದೇ ಬರುತ್ತದೆ. ಲೋಕದಲ್ಲಿ ಕಾರ್ಯಕಾರಣ ಭಾವವು ಕಂಡು ಬರುತ್ತದೆ. ಅನ್ನವನ್ನು ಬೇಯಿಸಲು ಅಕ್ಕಿ, ನೀರು, ಬೆಂಕಿ, ಪಾತ್ರೆ ಮುಂತಾದ ಸಲಕರಣೆಗಳು ಬೇಕು. ಮನೆ ಕಟ್ಟಲು ಇಟ್ಟಿಗೆ, ಸಿಮೆಂಟು, ಕಬ್ಬಿಣ ಮೊದಲಾದವು ಬೇಕು. ಒಂದು

ಕಾರಣ. ಇನ್ನೊಂದು ಕಾರ್ಯ. ಕಾರ್ಯ ಕಾರಣಗಳಿಗೆ ಭೇದವಿದ್ದೇ ಇರಬೇಕು. ಹಾಗೆಯೇ ಇವನು ಸೇವಕ, ಈತನು ಒಡೆಯ ಎಂಬ ಭೇದ ಕಣ್ಣಿಗೆ ಕಾಣುತ್ತದೆ. ವೇದಾಂತವನ್ನು ಬೋಧಿಸುವಾಗಲೂ ಶಿಷ್ಯ, ಆಚಾರ್ಯ ಎಂಬ ಭೇದ ಸ್ಪಷ್ಟವಾಗಿ ಗೋಚರಿಸುತ್ತದೆ.

ಇದು ಜಾಗ್ರತ್ತಿನಲ್ಲಿ ಮಾತ್ರವಲ್ಲ. ಸ್ವಪ್ನದಲ್ಲಿಯೂ ಹೀಗೆಯೇ ಇರುತ್ತದೆ. ಸುಷುಪ್ತಿಯಲ್ಲಿ ಯಾವುದೂ ಕಾಣಿಸುವುದಿಲ್ಲ. ಅಲ್ಲಿ ದ್ವೈತವೂ ಇಲ್ಲ. ಅದ್ವೈತವೂ ಇಲ್ಲ. ಅದು ಬೇರೆ ಮಾತು. ನಮಗೆ ಜ್ಞಾನವಿರುವುದು ಸ್ವಪ್ನ, ಜಾಗ್ರತ್ತು ಇವೆರಡರಲ್ಲಿಯೇ. ಇವೆರಡರಲ್ಲಿಯೂ ದ್ವೈತದ ವಿಜೃಂಭಣೆ ಸ್ಪಷ್ಟವಾಗಿದೆ.

ಈ ಶಂಕೆಗೆ ಸಮಾಧಾನ ಹೀಗೆ – ಲೋಕದಲ್ಲಿ ಈ ದ್ವೈತ ಪ್ರಪಂಚವು ಸತ್ಯವೆಂದು ಕಾಣುವುದು ಮಾಯೆಯ ಕಾರಣದಿಂದ. ಅನಾದಿಯಾದ ಮಾಯೆಯು ಮನುಷ್ಯನನ್ನು ಆವರಿಸಿಕೊಂಡಿರುತ್ತದೆ. ಆದ್ದರಿಂದಲೇ ಈ ವಿಶ್ವ, ಇದರೊಳಗಿನ ಸಂಸಾರ ಇದೆಲ್ಲವೂ ಕಾಣಿಸುತ್ತದೆ. ಇದೆಲ್ಲವೂ ಪರಮಾತ್ಮನಲ್ಲಿ ಕಲ್ಪಿತವಾದದ್ದು. 'ಚಿತ್' ಎಂಬ ಪರಬ್ರಹ್ಮ ವಸ್ತು ಒಂದೇ ಸತ್ಯ. ಈ ವಿಶ್ವವೆಲ್ಲವೂ ಅಸತ್ಯ, ಮಿಥ್ಯೆ ಎಂದು ಶಾಸ್ತ್ರವು ಘೋಷಿಸುತ್ತದೆ. ಮಿಥ್ಯೆಯೆಂದರೆ ಬಾಧ್ಯ ಎಂದರ್ಥ. ಯಾವುದರ ಜ್ಞಾನವು ಪರಮಾರ್ಥವನ್ನು ಕಂಡಾಗ ಬಾಧಿತವಾಗುವುದೋ ಅದೇ ಮಿಥ್ಯೆ. ಉದಾಹರಣೆಗೆ ಹಗ್ಗವನ್ನು ನೋಡಿ ಹಾವು ಎಂಬ ಭ್ರಾಂತಿ ಬಂದಿರುತ್ತದೆ. ಹತ್ತಿರ ಹೋಗಿ ಪರೀಕ್ಷಿಸಿದಾಗ ಅದು ಹಾವಲ್ಲ, ಹಗ್ಗ ಎಂದು ಗೊತ್ತಾಗುತ್ತದೆ. ಹಾವು ಎಂಬುದು ಈಗ ಮಿಥ್ಯೆಯಾಯಿತು. ಏಕೆಂದರೆ ಅದು ಬಾಧಿತವಾಯಿತು. ಹೀಗೆ ಯಾವುದು ಬಾಧಿತವಾಗುವುದೇ ಇಲ್ಲವೋ ಅದು ಸತ್ಯ. ಯಾವುದು ಬಾಧಿತವಾಗುವುದೋ ಅದು ಅಸತ್ಯ ಎಂದು ತಿಳಿಯಬೇಕು. ಸ್ವಪ್ನದಲ್ಲಿ ನಾನಾ ವಿಚಿತ್ರ ವಸ್ತುಗಳನ್ನು ಕಾಣುತ್ತೇವೆ. ಸತ್ತವನು ಬದುಕಿ ಬಂದಂತೆ ಕಾಣುತ್ತದೆ. ನಾವು ಆಕಾಶದಲ್ಲಿ ಹಕ್ಕಿಯಂತೆ ಹಾರಿಹೋಗುವುದು ಕಾಣುತ್ತದೆ. ಹೀಗೆ ನಾನಾ ಅದ್ಭುತಗಳು ಕನಸಿನಲ್ಲಿ ಸತ್ಯವೆಂದೇ ಪ್ರತೀತವಾಗುತ್ತದೆ. ಕನಸು ಕಾಣುತ್ತಿರುವವರೆಗೆ ಅವೆಲ್ಲವೂ ಸತ್ಯವೇ. ಅದು ಮಿಥ್ಯೆಯೆಂದು ಪ್ರತೀತಿಯಾಗುವುದೇ ಇಲ್ಲ. ಕನಸು ಕಳೆದು ಜಾಗ್ರತ್ತಿಗೆ ಬಂದೊಡನೆ ಕನಸಿನಲ್ಲಿ ಕಂಡದ್ದೆಲ್ಲವೂ ಮಿಥ್ಯೆಯೆಂದು ದೃಢವಾದ ನಂಬಿಕೆ ಬಂದು ಬಿಡುತ್ತದೆ. ಅಲ್ಲವೆ? ಹಾಗೆಯೇ ಮನುಷ್ಯನು ಯಾವಾಗ ಗುರುವಿನ ಅನುಗ್ರಹದಿಂದ ಮಾಯೆಯ ಆಕ್ರಮಣವನ್ನು ತಪ್ಪಿಸಿಕೊಂಡು ಪರಮಾರ್ಥ ಜ್ಞಾನವನ್ನು ಪಡೆಯುವನೋ ಆಗ

ಈ ಕಾರ್ಯಕಾರಣ ಭಾವ, ತಂದೆ ಮಗ, ಗುರುಶಿಷ್ಯ ಎಂಬುದೆಲ್ಲವೂ ಮಿಥ್ಯೆಯಾಗಿ ಬಿಡುತ್ತದೆ.

ಈಗ ಇನ್ನೊಂದು ಶಂಕೆ. ದ್ವೈತವೆಲ್ಲವೂ ಅಸತ್ಯವಾದರೆ ವೇದಾಂತ ಶಾಸ್ತ್ರವೂ ಅಸತ್ಯವಾಗಿ ಬಿಡುತ್ತದೆ. ಆಗ ಅದರ ಉಪದೇಶವನ್ನು ನಾವು ಹೇಗೆ ನಂಬಬೇಕು? ಈ ಪ್ರಶ್ನೆಗೆ ಉತ್ತರವೇನೆಂದರೆ, ವೇದಾಂತವು ಅಸತ್ಯವಾಗಿದ್ದರೂ ಅದು ಬೋಧಿಸುವುದು ಸತ್ಯವಾಗಿರಲು ಅಡ್ಡಿಯಿಲ್ಲ. ದೇವರ ವಿಗ್ರಹವು ಮಣ್ಣಿನದೋ, ಹಿತ್ತಾಳೆಯದೋ ಆಗಿರಬಹುದು, ಅದರಿಂದ ಪ್ರತೀತನಾಗುವ ಭಗವಂತನು ಮಾತ್ರ ಸತ್ಯವೇ ಆಗಿರುತ್ತಾನೆ. ಗೋಡೆಯಲ್ಲಿ ಬರೆದ ಚಿತ್ರ, ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬ – ಇವು ಮಿಥ್ಯೆಯಾದರೂ ಅವುಗಳಿಂದ ತೋರುವ ಮನುಷ್ಯನೋ, ಸ್ತ್ರೀಯೋ, ಸತ್ಯವಾಗುತ್ತದೆ. ಹಾಗೇ ವೇದಾಂತವು ಸತ್ಯ ವಸ್ತುವನ್ನು ತಿಳಿಸುತ್ತದೆ. ಇದೆಲ್ಲವೂ ಮಾಯೆಯ ವಿಜೃಂಭಣೆ. ಅಜ್ಞಾನಾವಸ್ಥೆಯಲ್ಲಿ ಮಾತ್ರ ಈ ಮಾಯೆಯು ತೋರುತ್ತದೆ. ವೇಶ್ಯೆಯು ತನ್ನ ಕೃತಕವಾದ ವಿಲಾಸದಿಂದ ಪುರುಷನನ್ನು ಮೋಹಗೊಳಿಸುವಂತೆ ಈ ಮಾಯೆಯು ತನ್ನ ವಿಲಾಸದಿಂದ ಸಮಸ್ತ ಜೀವಿಗಳನ್ನೂ ಮೋಹಗೊಳಿಸುತ್ತದೆ. ಎಚ್ಚರ, ಕನಸು, ನಿದ್ರೆ – ಇವು ಮೂರು ಮನಸ್ಸಿನ ಮೂರು ಅವಸ್ಥೆಗಳು. ಇವು ಅಜ್ಞಾನಕ್ಕೆ ಕಾರಣವಾಗಿದ್ದು ಚಕ್ರದಂತೆ ತಿರುಗುತ್ತಲೇ ಇರುತ್ತವೆ. ಆತ್ಮನು ದೇಹದಲ್ಲಿ ಸತ್ಯವಾದ ವಸ್ತು. ಆತನು ದೇಹದ ಕೃತ್ಯಗಳಿಗೆ ಕೇವಲ ಸಾಕ್ಷಿಯಾಗಿರುತ್ತಾನೆ. ಸರ್ವಸಾಕ್ಷಿಯಾದ ಸೂರ್ಯನು ಪ್ರಾಣಿಗಳ ಕರ್ಮಕ್ಕೆ ಕೇವಲ ಸಾಕ್ಷಿಯೇ ಹೊರತು ಆ ಕರ್ಮಗಳಿಂದ ಎಂದಿಗೂ ಲಿಪ್ತನಾಗುವುದಿಲ್ಲ. ನೀರಿನಲ್ಲಿ ಕಾಣುವ ಸೂರ್ಯ ಪ್ರತಿಬಿಂಬವು ನೀರು ಚಲಿಸಿದಾಗ ಚಲಿಸುವಂತೆ ಕಾಣುತ್ತದೆ. ಹಾಗೆಯೇ ಮನಸ್ಸಿನ ಸಂಪರ್ಕದಿಂದ ಪರಮಾತ್ಮನು ಸಂಸಾರಿಯಂತೆ ಕಾಣುತ್ತಾನೆ. ಕೊಳದಲ್ಲಿ ನೀರು ಆರಿಹೋದಾಗ ಸೂರ್ಯಪ್ರತಿಬಿಂಬವು ನಿವೃತ್ತವಾಗುತ್ತದೆ. ಅಂತೆಯೇ ಅಂತಃಕರಣದ ಸಂಬಂಧವು ತಪ್ಪಿದಾಗ ಜೀವನು ಇಲ್ಲವೆನಿಸುತ್ತಾನೆ. ಇದೆಲ್ಲವನ್ನೂ ತಿಳಿಸಿಕೊಡುವುದಕ್ಕೆ ನಮಗೆ ಮತ್ತೊಂದು ಅವಸ್ಥೆಯ ಅನುಭವವೂ ಇದೆ. ಇದೇ ಸುಷುಪ್ತಿ. ಈ ಅವಸ್ಥೆಯಲ್ಲಿ ಯಾವುದೊಂದು ದೃಶ್ಯದ ಅರಿವೂ ನಮ್ಮಲ್ಲಿರುವುದಿಲ್ಲ. ಆಗ ನಾವು ಕರ್ತೃವೆಂದಾಗಲಿ, ಭೋಕ್ತೃವೆಂದಾಗಲಿ ತೋರುವುದಿಲ್ಲ. ಕಾರಣವೇನೆಂದರೆ ಆ ಸಮಯದಲ್ಲಿ ಮನಸ್ಸು ತನ್ನ ಚೇಷ್ಟೆಯನ್ನು ಬದಿಗೊತ್ತಿ ತೆಪ್ಪಗಿರುವುದು. ಇದು ಕಾಲನಿಯಮಕ್ಕೆ ಒಳಪಟ್ಟ ಅವಸ್ಥೆ. ಕಾಲನಿಯಮವೇ ಇಲ್ಲದೆ ಮನಸ್ಸಿನ ಸಂಬಂಧವು ಪೂರ್ಣವಾಗಿ ತಪ್ಪಿಹೋಗುವುದೇ ಮುಕ್ತಿ

ಎನಿಸುತ್ತದೆ. ಈ ವಿಚಿತ್ರವಾದ ಪ್ರಪಂಚವು ಸುಷುಪ್ತಿಯಲ್ಲಿ ಎಂದರೆ ಗಾಢ ನಿದ್ರೆಯಲ್ಲಿ ಎಲ್ಲಿಗೆ ಹೋಗಿತ್ತು? ಎಲ್ಲಿ ಅಡಗಿತ್ತು? ಅದು ಎಲ್ಲಿಗೂ ಹೋಗಲೂ ಇಲ್ಲ, ಅಡಗಲೂ ಇಲ್ಲ. ನಮ್ಮ ಹೊರಗೆ ಈ ಪ್ರಪರಚವು ತನ್ನ ಪಾಡಿಗೆ ಇದ್ದೇ ಇತ್ತು ಎಂದು ನಾವು ತಿಳಿಯುತ್ತೇವೆ. ವಸ್ತುತಃ ಅದು ಇಲ್ಲವೇ ಇಲ್ಲವೆಂದು ತಿಳಿಯಬೇಕು. ಸ್ವಪ್ನದಲ್ಲಿ ಕಾಣುವ ಪ್ರಪಂಚವು ಜಾಗ್ರತ್ತಿನಲ್ಲಿ ಎಲ್ಲಿಗೆ ಹೋಗಿರುತ್ತದೆ? ಎಲ್ಲಿ ಅಡಗಿರುತ್ತದೆ? ಅದು ಇರಲೇ ಇಲ್ಲವೆಂದು ನಾವು ನಂಬುತ್ತೇವಲ್ಲವೇ? ಹಾಗೆಯೇ ಈ ಪ್ರಪಂಚವು ವಾಸ್ತವವಾಗಿ ಇಲ್ಲವೆಂದೂ ಮಾಯೆಯಿಂದ ಕಾಣುತ್ತಿರುವುದೆಂದೂ ಮಾಯೆಯ ಹಿಡಿತ ತಪ್ಪಿದೊಡನೆ ಅಳಿಸಿಹೋಗುವುದೆಂದೂ ನಿಶ್ಚಯವಾಗಿ ನಾವು ತಿಳಿಯಬೇಕು. ಹೀಗೆ ಯಾವ ಮಹಾತ್ಮನು ಮಾಯೆಗೊಳಗಾಗಿ ಅನಂತಪುರುಷಸ್ವರೂಪನಾಗಿ ಅದ್ಭುತ ಜಗತ್ತಾಗಿ ಕಾಣಿಸಿಕೊಳ್ಳುವನೋ ಅಂತಹ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ನಮಸ್ಕಾರ.

**ಭೂರಂಭಾಂಸ್ಯನಲೋಽನಿಲೋಂಬರಮಹರ್ನಾಥೋ ಹಿಮಾಂಶುಃ ಪುಮಾನ್**
**ಇತ್ಯಾಭಾತಿ ಚರಾಚರಾತ್ಮಕಮಿದಂ ಯಸ್ಯೈವ ಮೂರ್ತ್ಯಷ್ಟಕಮ್ ।**
**ನಾನ್ಯತ್ ಕಿಂಚನ ವಿದ್ಯತೇ ವಿಮೃಶತಾಂ ಯಸ್ಮಾತ್ ಪರಸ್ಮಾದ್ ವಿಭೋಃ ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥ ೯ ॥**

ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಪುರುಷ, (ಜೀವಾತ್ಮ, ಚೈತನ್ಯ) ಎಂದು ಕಾಣುವ ಈ ಜಗತ್ತು ಸರಿಯಾಗಿ ವಿಮರ್ಶಿಸಿ ನೋಡತಕ್ಕವರಿಗೆ ಯಾವ ಪರಮೇಶ್ವರನ ಎಂಟು ಮೂರ್ತಿಗಳಾಗಿ ಮಾತ್ರ ಕಾಣುತ್ತವೆಯೋ ವಿಭುವಾದ ಯಾವ ಪರಮಾತ್ಮನಿಗಿಂತ ಅತಿರಿಕ್ತವಾಗಿ ಇನ್ನಾವ ವಸ್ತುವೂ ಇಲ್ಲವೇ ಇಲ್ಲವೆಂದು ವಿಚಾರಶೀಲರಿಗೆ ತಿಳಿದು ಬರುತ್ತದೆಯೋ ಅಂತಹ ಗುರುಮೂರ್ತಿಯಾದ ಶ್ರೀ ದಕ್ಷಿಣಾಮೂರ್ತಿಗೆ ಇದೋ ಈ ನನ್ನ ನಮಸ್ಕಾರ.

ಈಶ್ವರನಿಗೆ ಅಷ್ಟಮೂರ್ತಿ ಎಂದು ಹೆಸರಿದೆ. ಮೂರ್ತಿ ಎಂದರೆ ಇಂದ್ರಿಯಕ್ಕೆ ಗೋಚರವಾಗುವ ಸ್ಥೂಲ ವಸ್ತು. ಸೂರ್ಯಚಂದ್ರರೆಂಬ ಶಬ್ದದಿಂದ ಗ್ರಹ ನಕ್ಷತ್ರಾದಿ ರೂಪದಲ್ಲಿರುವ ಎಲ್ಲ ಜ್ಯೋತಿಗಳನ್ನು ತೆಗೆದುಕೊಳ್ಳಬೇಕು. ಗ್ಯಾಸ್ (Gas) ಎಂಬುದು ವಾಯುವಿನಲ್ಲಿ ಸೇರುತ್ತದೆ. ವಿದ್ಯುತ್ ಎಂಬುದು ಅಗ್ನಿಯಲ್ಲಿ ಸೇರುತ್ತದೆ. ಪುರುಷನೆಂದರೆ ಜೀವವಿರುವ ಪ್ರಾಣಿ. ಸಕಲಪ್ರಾಣಿಗಳ ದೇಹವೂ

ಪಂಚಭೂತಗಳಲ್ಲಿ ಸೇರಿರುತ್ತದೆ. ದೇಹದಲ್ಲಿರುವ ಜೀವವೇ ಇಲ್ಲಿ ಪುರುಷ. ಅದೇ ಆತ್ಮ ಚೈತನ್ಯ. ಇಷ್ಟು ವಸ್ತುಗಳನ್ನು ಬಿಟ್ಟು ಜಗತ್ತಿನಲ್ಲಿ ಇನ್ನು ಯಾವ ವಸ್ತುವೂ ಇಲ್ಲ. ಈ ಎಂಟು ವಸ್ತುಗಳು ಪರಮಾತ್ಮನ ಮೂರ್ತಿಗಳೆಂದು ತಿಳಿಯಲಾಗಿದೆ. ಪರಮಾತ್ಮನೇ ಜಗದ್ರೂಪನಾಗಿ ಕಾಣಿಸಿಕೊಂಡಿದ್ದಾನೆ. ಅದು ಆತನ ಮಾಯಾ ಚಮತ್ಕಾರ.

ಮಹಾಕವಿ ಕಾಳಿದಾಸನ ಕುಮಾರ ಸಂಭವ ಮಹಾಕಾವ್ಯದಲ್ಲಿ ಪರಮೇಶ್ವರನು ಋಷಿಗಳನ್ನು ಕುರಿತು–

**ವಿದಿತಂ ವೋ ಯಥಾ ಸ್ವಾರ್ಥಾ ನ ಮೇ ಕಾಶ್ಚಿತ್ ಪ್ರವೃತ್ತಯಃ।**
**ನನು ಭೂತಿಭಿರಷ್ಟಾಭಿರಿತ್ಥಂಭೂತೋಽಸ್ಮಿ ಸೂಚಿತಃ॥ (೬–೨೬)**

ಎಂದು ಹೇಳುತ್ತಾನೆ. "ಮಹರ್ಷಿಗಳೆ, ನನ್ನ ಕಾರ್ಯಪ್ರವೃತ್ತಿಗಳಲ್ಲಿ ಯಾವುದೂ ಸ್ವಾರ್ಥಕ್ಕಾಗಿ ಅಲ್ಲ ಎಂಬುದು ನಿಮಗೆ ತಿಳಿದೇ ಇದೆ. ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಜೀವಾತ್ಮ ಎಂಬ ಮಹಿಮಾನ್ವಿತ ಮೂರ್ತಿಗಳಿಂದ ಈ ಪ್ರಕಾರವಾಗಿದ್ದೇನೆಂಬುದು ಸೂಚಿತವಾಗಿದೆಯಲ್ಲವೆ?"

ಈಶ್ವರನಿಗೆ ಅಷ್ಟಮೂರ್ತಿ ಎಂದು ಹೆಸರಿದೆ. ತನ್ನ ಮಾಯಾಶಕ್ತಿಯಿಂದ ಜಗತ್ತಾಗಿ ಮನುಷ್ಯರೇ ಮೊದಲಾದ ಪ್ರಾಣಿಗಳ ಸ್ವರೂಪವನ್ನು ಪಡೆದಿದ್ದಾನೆಂದು ತಿಳಿಯಬೇಕು.

ಶ್ರೀ ಸುರೇಶ್ವರಾಚಾರ್ಯರು, ತಮ್ಮ ಮಾನಸೋಲ್ಲಾಸದಲ್ಲಿ ಹೀಗೆ ಬರೆಯುತ್ತಾರೆ.

**ಷಟ್‌ತ್ರಿಂಶತ್ ತತ್ತ್ವರೂಪಾಸು ಪರಮೇಶ್ವರಮೂರ್ತಿಷು।**
**ಪ್ರತ್ಯಕ್ಷೇಣೋಪಲಭ್ಯಂತೇ ಸರ್ವೈರಪ್ಯಷ್ಟಮೂರ್ತಯಃ॥**

"ಮೂವತ್ತಾರು ತತ್ತ್ವ ರೂಪದಲ್ಲಿರುವ ಪರಮೇಶ್ವರನ ಮೂರ್ತಿಗಳಲ್ಲಿ ಭೂಮಿ, ಜಲ–ಮುಂತಾದ ಎಂಟು ಮೂರ್ತಿಗಳು ಮಾತ್ರ ಪ್ರತ್ಯಕ್ಷವಾಗಿ ವಾಚಕರಿಗೆ ತಿಳಿದು ಬರುತ್ತವೆ." ಆದ್ದರಿಂದಲೇ ಈ ಶ್ಲೋಕದಲ್ಲಿ ಶ್ರೀ ಶಂಕರರು ಎಂಟು ಮೂರ್ತಿಗಳನ್ನು ಮಾತ್ರ ಹೇಳಿದ್ದಾರೆಂದು ಅಭಿಪ್ರಾಯ.

ಮೂವತ್ತಾರು ತತ್ತ್ವಗಳು ಯಾವುವು? ವೇದಾಂತದಲ್ಲಿ ಪರಬ್ರಹ್ಮ ಎಂಬುದು ಒಂದು ತತ್ತ್ವ. ಇಷ್ಟು ತತ್ತ್ವಗಳನ್ನು ಎಲ್ಲಿಯೂ ಎಣಿಸಿಲ್ಲ. ಸಾಂಖ್ಯರು ಇಪ್ಪತ್ತೈದು ತತ್ತ್ವಗಳನ್ನು ಮಾತ್ರ ಹೇಳಿದ್ದಾರೆ. ಹೀಗೆ ಷಡ್‌ದರ್ಶನಗಳಲ್ಲಿಯೂ ಮೂವತ್ತಾರು ತತ್ತ್ವಗಳೆಂದು ಹೇಳಿಲ್ಲ. ಶೈವತಂತ್ರದ ಭೇದಾಭೇದವಾದದಲ್ಲಿ ಮಾತ್ರ ಮೂವತ್ತಾರು ತತ್ತ್ವಗಳೆಂದು ಹೇಳಿರುವುದುಂಟು. ಅವು ಯಾವುವೆಂದರೆ – ತತ್ತ್ವದಲ್ಲಿ ಶಿವತತ್ತ್ವ, ವಿದ್ಯಾತತ್ತ್ವ, ಆತ್ಮತತ್ತ್ವ ಎಂದು ಮೂರು ವಿಭಾಗಗಳು. ಅವುಗಳಲ್ಲಿ ೩೬ ತತ್ತ್ವಗಳು ಸೇರಿಕೊಳ್ಳುತ್ತವೆ.

1. ಶಿವತತ್ತ್ವ – ಶಿವ, ಶಕ್ತಿ = ೨

2. ವಿದ್ಯಾತತ್ತ್ವ – ಸದಾಶಿವ, ಈಶ್ವರ, ಶುದ್ಧವಿದ್ಯಾ = ೩

3. ಆತ್ಮತತ್ತ್ವ – ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ,ಬುದ್ಧಿ,ಅಹಂಕಾರ,ಮನಸ್ಸು, ಪಂಚಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಪಂಚತನ್ಮಾತ್ರಗಳು, ಪಂಚಮಹಾಭೂತಗಳು ೩೧

ಒಟ್ಟು ಮೂವತ್ತಾರು ತತ್ತ್ವಗಳಾಗುತ್ತವೆ. ಶಾಕ್ತರಿಗೂ ಇದು ಸಂಮತ. ಅಷ್ಟಮೂರ್ತಿಗಳಲ್ಲಿ ಸೇರಿದ ಸೂರ್ಯ, ಚಂದ್ರ ಎಂಬ ಎರಡು ಮೂರ್ತಿಗಳು ಈ ಗಣನೆಯಲ್ಲಿ ಬಿಟ್ಟುಹೋಗುತ್ತವೆ. ದೇಹದಲ್ಲಿರುವ ಪ್ರಾಣ, ಅಪಾನ ಎಂಬ ವಾಯುಗಳನ್ನು ಸೂರ್ಯ, ಚಂದ್ರ ಎಂದು ಹೇಳುವುದುಂಟು. ಪ್ರಾಯಶಃ ತಂತ್ರಶಾಸ್ತ್ರದಲ್ಲಿ ಮೂವತ್ತಾರು ತತ್ತ್ವಗಳೆಂದು ವಿಭಾಗಿಸಿರುವುದುಂಟು. ಅವು ಪರಮಾತ್ಮನ ಸ್ವರೂಪಗಳೇ. ಪ್ರಸಿದ್ಧವೂ ಪ್ರತ್ಯಕ್ಷವೂ ಆದ ಅಷ್ಟಮೂರ್ತಿಗಳೆಂಬ ವಿಭಾಗವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ ಎಂದು ಸುರೇಶ್ವರಾಚಾರ್ಯರ ಆಶಯ. ಅವರು ಈ ಮೂವತ್ತಾರು ತತ್ತ್ವಗಳನ್ನು ಇನ್ನೊಂದು ವಿಧದಲ್ಲಿ ವಿಂಗಡಿಸಿ ತೋರಿಸಿದ್ದಾರೆ.

ಬ್ರಹ್ಮಾಂಡವು ಸಮಷ್ಟಿ. ಮನುಷ್ಯನ ಶರೀರವು ವ್ಯಷ್ಟಿ. ಬ್ರಹ್ಮಾಂಡದ ಸ್ವರೂಪವನ್ನು ತಿಳಿದುಕೊಳ್ಳಲು ಮನುಷ್ಯನಿಗೆ ಸಾಧ್ಯವೇ ಇಲ್ಲ. ಅದನ್ನು ವ್ಯಷ್ಟಿಯಾದ ನಮ್ಮ ಶರೀರದಲ್ಲಿಯೇ ಕಂಡುಕೊಳ್ಳಬಹುದು. ಜಗತ್ತಿನಲ್ಲಿರುವ ಜಲರಾಶಿಯನ್ನು ಯಾರೂ ನೋಡಿ ಬರಲು ಸಾಧ್ಯವಿಲ್ಲ. ಒಂದು ಬೊಗಸೆ

ನೀರಿನಲ್ಲಿ ಜಲರಾಶಿಯ ಸಕಲ ಗುಣಗಳೂ ಅಡಗಿರುತ್ತವೆ. ಈ ಬೊಗಸೆ ನೀರನ್ನು ಪರೀಕ್ಷಿಸಿ ಜಲರಾಶಿಯ ಸ್ವರೂಪವನ್ನರಿತುಕೊಳ್ಳಬಹುದು. ಈ ಅಭಿಪ್ರಾಯದಿಂದ ಶ್ರೀ ಸುರೇಶ್ವರಾಚಾರ್ಯರು ನಮ್ಮ ಶರೀರದಲ್ಲಿಯೇ ಬ್ರಹ್ಮಾಂಡವು ಅಡಗಿದೆಯೆಂಬುದನ್ನು ಶಾಸ್ತ್ರಾಂತರಗಳಿಂದ ಸಂಗ್ರಹಿಸಿ ಹೀಗೆ ತಿಳಿಸುತ್ತಾರೆ.

ಈ ಜಗತ್ತು ಈಶ್ವರಾತ್ಮಕವಾದಂತೆ ಈ ಶರೀರವೂ ಈಶ್ವರಾತ್ಮಕವೆಂದು ತಿಳಿಯಬೇಕು. ಬ್ರಹ್ಮಾಂಡದಲ್ಲಿ ಭೂಮಿಯೇ ಮೊದಲಾದ ಸಪ್ತಲೋಕಗಳಿವೆಯೆಂದು ಶಾಸ್ತ್ರದಲ್ಲಿ ಹೇಳಿದೆ. ಭೂಲೋಕಾದಿಗಳು ದೇಹದಲ್ಲಿರುವ ಮೂಲಾಧಾರವೇ ಮೊದಲಾದ ಷಟ್‌ಚಕ್ರಗಳಲ್ಲಿಯೂ ಬ್ರಹ್ಮರಂಧ್ರದಲ್ಲಿಯೂ ಕ್ರಮವಾಗಿ ಇರುತ್ತವೆ. ಬೆನ್ನುಮೂಳೆಯು ಮಹಾಮೇರುವೆಂದೂ ಮೂಳೆಗಳು ಕುಲಪರ್ವತಗಳೆಂದೂ ತಿಳಿಯತಕ್ಕದ್ದು. ಪಿಂಗಳ ನಾಡಿಯೇ ಗಂಗಾನದಿ. ಇಡಾನಾಡಿಯು ಯಮುನಾ ನದಿ, ಸುಷುಮ್ನಾ ನಾಡಿಯೇ ಸರಸ್ವತೀ ನದಿ – ಇತರ ನಾಡಿಗಳು ಸಿಂಧೂ ಮುಂತಾದ ಪುಣ್ಯ ನದಿಗಳೆಂದೂ ಗಣಿಸಬೇಕು. ಈ ಪ್ರಕಾರದಲ್ಲಿ ಶರೀರವೇ ಬ್ರಹ್ಮಾಂಡವೆಂಬುದನ್ನು ಮಾನಸೋಲ್ಲಾಸದಲ್ಲಿ ಶ್ರೀ ಸುರೇಶ್ವರರು ವಿಸ್ತಾರವಾಗಿ ನಿರೂಪಿಸಿದ್ದಾರೆ.

ಈ ಒಂಬತ್ತನೆಯ ಶ್ಲೋಕದಲ್ಲಿ ಮುಖ್ಯವಾದ ಆಶಯವೇನಿದೆಯೆಂಬುದನ್ನೀಗ ವಿಚಾರಿಸಬಹುದು. **ಏಕಮೇವಾದ್ವಿತೀಯಂ ಬ್ರಹ್ಮ** ಎಂಬ ಸಿದ್ಧಾಂತಕ್ಕೆ ಪೋಷಕವಾದ ಶ್ಲೋಕ ಇದು. ಈ ವಿಶ್ವವೆಲ್ಲವೂ ಪರಮೇಶ್ವರನ ಬಾಹ್ಯರೂಪ. ಭೂಮಂಡಲಾದಿರೂಪಗಳಿಂದ ಅವನು ಪ್ರತ್ಯಕ್ಷನಾಗಿದ್ದಾನೆ. ಈ ಜಗತ್ತು ಪರಮಾತ್ಮನ ಸ್ಥೂಲರೂಪ. ಈ ಭಾವನೆ ಸಾಧಕನಲ್ಲಿ ತಳ ಊರಿ ನಿಲ್ಲಬೇಕು. ಈ ಜಗತ್ತಿನ ಒಂದಂಶವೇ ನನ್ನ ಶರೀರದಲ್ಲಿಯೂ ಇದೆ. ಬ್ರಹ್ಮಾಂಡದ ಅಭಿಮಾನಿಯಾದ **ವಿರಾಟ್ ಪುರುಷನೇ ನನ್ನ ದೇಹದಲ್ಲಿ ಜೀವಾತ್ಮನೆನಿಸಿದ್ದಾನೆ** ಎಂಬ ಭಾವನೆ ದೃಢವಾಗಬೇಕು. ಜಗತ್ತಿನಲ್ಲಿರುವ ಸಕಲವಸ್ತುಗಳೂ ಆ ಪರಮೇಶ್ವರನ ಅಷ್ಟಮೂರ್ತಿಗಳು. ಆದ್ದರಿಂದ ಇವು ನನ್ನವು – ಇವು ಅವನವು ಎಂಬ ಭೇದ ದೃಷ್ಟಿಯೇ ಸಂಸಾರದ ಮೂಲವಾದ್ದರಿಂದ ಭೇದ ದೃಷ್ಟಿಯೇ ತೊಲಗಿ ಹೋಗುವಂತೆ ಅನುಗ್ರಹಿಸಲೆಂದು ಭಗವಂತನನ್ನು ಪ್ರಾರ್ಥಿಸಬೇಕು. ನಾನು, ನೀನು, ಅವನು, ನನ್ನದು, ನಿನ್ನದು, ಅವನದು – ಎಂಬ ಮಿಥ್ಯಾಜ್ಞಾನವೇ ಮಾಯೆ. ಇದೇ ಜನರ ಶೋಕ, ಮೋಹ, ಚಿಂತೆ, ಕಲಹಾದಿಗಳಿಗೆ ನಿಮಿತ್ತವಾದದ್ದು. ಬೇರು ನಾಶವಾದರೆ ಮರವು ನಾಶವಾಗುವಂತೆ ಈ

ಮಿಥ್ಯಾಜ್ಞಾನವು ನಾಶವಾದರೆ ಅದರಿಂದಾದ ಸಂಸಾರವೃಕ್ಷವು ಸಮೂಲವಾಗಿ ನಾಶ ಹೊಂದುತ್ತದೆ ಎಂಬುದು ಈ ಶ್ಲೋಕದ ತಾತ್ಪರ್ಯ.

ಇಲ್ಲಿ ಮಾನಸೋಲ್ಲಾಸಕಾರರಾದ ಶ್ರೀ ಸುರೇಶ್ವರಾಚಾರ್ಯರು ಹೇಳಿರುವ ವಿಷಯಗಳು ಗಮನಾರ್ಹವಾದುವು.

ಒಂದು ದಿನದಲ್ಲಿ ಮನುಷ್ಯನು ಇಪ್ಪತ್ತೊಂದು ಸಾವಿರದ ಆರು ನೂರು ಸಲ (೨೧೬೦೦) ಉಸಿರಾಡುತ್ತಾನೆ. ಉಸಿರನ್ನು ಮೇಲಕ್ಕೆ ಎಳೆದಾಗ "ಸೋ" ಎಂದೂ ಉಸಿರನ್ನು ಬಿಟ್ಟಾಗ "ಹಂ" ಎಂದೂ ತನಗೆ ಗೊತ್ತಿಲ್ಲದೆ ಉಚ್ಚರಿಸುತ್ತಿದ್ದಾನೆ. ಇದೇ "ಸೋಽಹಂ" ಎಂಬ ಮಂತ್ರ. ಉದ್ದೇಶಪೂರ್ವಕವಾಗಿ ಜಪಿಸದಿದ್ದರೂ ತಾನಾಗಿ ಜಪವಾಗುವುದರಿಂದ ಇದಕ್ಕೆ "ಅಜಪಾ" ಮಂತ್ರವೆಂದು ಹೆಸರು. ಈ ಮಂತ್ರದ ಅರ್ಥ ಅವನೇ ನಾನು ಎಂದು. ಆ ಪರಮಾತ್ಮನೇ ಈ ನಾನು – ಎಂದು ಜೀವಾತ್ಮನ ಅನಿಸಿಕೆ. "ಸೋಽಹಂ" ಎಂಬುದರ 'ಸ' 'ಹ'ಕಾರಗಳನ್ನು ಲೋಪ ಮಾಡಿದರೆ "ಓಮ್" ಎಂದಾಗುವುದು ಇದೇ ಓಂಕಾರ – ಪ್ರಣವ. ಇದರಲ್ಲಿ ಅಕಾರ, ಉಕಾರ, ಮಕಾರಗಳಿವೆ. ಸ್ವಲ್ಪ ದೀರ್ಘಕಾಲ ಇದನ್ನು ಎಳೆದು ಉಚ್ಚರಿಸಿದರೆ ಅಂತ್ಯದಲ್ಲಿ ಬಿಂದು(ಅನುಸ್ವಾರ)ವೂ ಅನುರಣನರೂಪವಾದ ನಾದವೂ ಕೇಳಿಸುತ್ತದೆ. ಆದ್ದರಿಂದ ಪ್ರಣವವು ೫ ಅಕ್ಷರಗಳಿಂದ ಕೂಡಿದೆ ಎಂದು ತಿಳಿಯಬೇಕು. ಈ ಪಂಚಾಕ್ಷರಗಳಿಗೆ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ ಈ ಐವರು ಕ್ರಮವಾಗಿ ಅಧಿದೇವತೆಗಳೆಂದು ತಿಳಿಯಬೇಕು. ಹಿಂದೆ ಹೇಳಿದ ಮೂವತ್ತಾರು ತತ್ತ್ವಗಳೊಡನೆ ಈ ಪಂಚದೇವತೆಗಳು ಓಂಕಾರದ ಪಂಚಾಕ್ಷರಗಳಲ್ಲಿ ಪ್ರತಿಷ್ಠಿತರಾಗಿರುತ್ತಾರೆ.

ಹೀಗೆ ಜೀವಾತ್ಮನು "ಸೋಽಹಂ" ಎಂದು ಜಪಿಸುತ್ತಲೇ ಇದ್ದರೂ ಅದರ ಅರ್ಥವೇನೆಂಬುದನ್ನು ತಿಳಿಯದೇ ಅಜ್ಞಾನದಿಂದ ವಂಚಿತನಾಗಿದ್ದಾನೆ. ಪಂಚಭೂತಗಳು ದೇಹದ ಐದು ಮೂರ್ತಿಗಳಾದವು. ಪ್ರಾಣಾಪಾನಗಳು ಕಾಲದ ನಿಯಾಮಕರಾದ ಸೂರ್ಯಚಂದ್ರರು, ಸಾಕ್ಷಿಯಾದ ಜೀವಾತ್ಮನೇ ಈಶ್ವರ. ಈ ಪ್ರಕಾರವಾಗಿ ಮಾನವನೇ ಅಷ್ಟಮೂರ್ತಿಯಾಗುತ್ತಾನೆ. ಆತ್ಮನು ಅಂತಃಕರಣ ವಿಶಿಷ್ಟನಾದಾಗ ಜೀವ. ಅಂತಃಕರಣ ಸಂಬಂಧವಿಲ್ಲದೆ ಸಾಕ್ಷಿಯಾಗಿ ನಿಂತಾಗ ಈಶ್ವರ. ಈ ಪ್ರಕಾರವಾಗಿ ಮಾನವನನ್ನು ಈಶ್ವರನ ಅಷ್ಟಮೂರ್ತಿಗಳೆಂದೂ ಹೇಳಬಹುದು. ಅಷ್ಟಮೂರ್ತಿಧರನಾದ ಈಶ್ವರನೆಂದೂ ಹೇಳಬಹುದು.

ತತ್ತ್ವ ಸಾಕ್ಷಾತ್ಕಾರಕ್ಕೆ ಎರಡು ಮಾರ್ಗಗಳುಂಟು. ಒಂದು ಅಷ್ಟಾಂಗ ಯೋಗ ಮಾರ್ಗ. ಕೆಲವು ಹಠಯೋಗಿಗಳು ಈ ಮಾರ್ಗದಲ್ಲಿ ಸಾಗುತ್ತಾರೆ. ಇನ್ನೊಂದು ನಿಷ್ಕಾಮ ಕರ್ಮದಿಂದ ಚಿತ್ತ ಶುದ್ಧಿಯನ್ನು ಪಡೆದು ನಿಷ್ಕಾಮ ಭಕ್ತಿಯಿಂದ ತತ್ತ್ವಜ್ಞಾನವನ್ನು ಪಡೆಯುವುದು. ಈ ಎರಡು ಮಾರ್ಗಗಳಲ್ಲಿಯೂ ಸಿದ್ಧಿಯನ್ನು ಪಡೆಯಲು ಗುರೂಪದೇಶವೂ ಈಶ್ವರಾನುಗ್ರಹವೂ ಅತ್ಯಾವಶ್ಯಕ.

**ಸರ್ವಾತ್ಮತ್ವಮಿತಿ ಸ್ಫುಟೀಕೃತಮಿದಂ ಯಸ್ಮಾದಮುಷ್ಮಿನ್ ಸ್ತವೇ**
**ತೇನಾಸ್ಯ ಶ್ರವಣಾತ್ತದರ್ಥಮನನಾತ್ ಧ್ಯಾನಾಚ್ಚ ಸಂಕೀರ್ತನಾತ್ ।**
**ಸರ್ವಾತ್ಮತ್ವ ಮಹಾವಿಭೂತಿಸಹಿತಂ ಸ್ಯಾದೀಶ್ವರತ್ವಂ ಸ್ವತಃ**
**ಸಿಧ್ಯೇತ್ತತ್ಪುನರಷ್ಟಧಾ ಪರಿಣತಂ ಚೈಶ್ವರ್ಯಮವ್ಯಾಹತಮ್ ॥ ೧೦ ॥**

ಈ ಪ್ರಕಾರವಾಗಿ ಸರ್ವಾತ್ಮಭಾವವನ್ನು ಈ ಸ್ತೋತ್ರದಲ್ಲಿ ಸ್ಪಷ್ಟವಾಗಿ ತಿಳಿಸಿಕೊಡಲಾಗಿದೆ. ಆದ್ದರಿಂದ ಈ ಸ್ತೋತ್ರವನ್ನು ಶ್ರವಣ ಮಾಡಿ ಅದರ ಅರ್ಥವನ್ನು ಮನನ ಮಾಡಬೇಕು. ಹಾಗೆಯೇ ಅರ್ಥವನ್ನು ಸತತವಾಗಿ ಧ್ಯಾನಿಸುತ್ತ ಸಂಕೀರ್ತನ ಮಾಡುವುದರಿಂದ ಸರ್ವಾತ್ಮತ್ವವೆಂಬ ಮಹಾವಿಭೂತಿಯಿಂದೊಡಗೂಡಿದ ಈಶ್ವರತ್ವವು ತಾನಾಗಿ ಸಿದ್ಧಿಸುವುದು. ಅಲ್ಲದೆ ಎಂಟು ಬಗೆಯಲ್ಲಿ ಪರಿಣಮಿಸಿದ ಐಶ್ವರ್ಯವು ತಡೆಯಿಲ್ಲದೆ ಸತತವಾಗಿ ಪ್ರಾಪ್ತ ವಾಗುವುದು ಇದಿಷ್ಟು ಶ್ಲೋಕದ ಅರ್ಥ.

ಮಾನವನು **ಅಹಂ ಅಹಂ – ನಾನು ನಾನು** ಎಂದು ತನ್ನೊಬ್ಬನನ್ನು ಮಾತ್ರ ಕರೆದುಕೊಳ್ಳುತ್ತಾನೆ. ಇದು ತನ್ನ ದೇಹವನ್ನು ಮಾತ್ರ ಉಪಾಧಿಯಾಗಿ ಇಟ್ಟುಕೊಂಡಿರುವ ಸಂಕುಚಿತವಾದ ಭಾವನೆ. ಈ ಭಾವನೆಯನ್ನು ವಿಸ್ತರಿಸಿ ಸರ್ವಜಗತ್ತಿನ ಆತ್ಮನೂ ನಾನು ಎಂದು ತಿಳಿದಾಗ ಸರ್ವದ ಆತ್ಮನಾಗಿ ವಿರಾಟ್ ಸ್ವರೂಪನಾಗುತ್ತಾನೆ. ಇನ್ನೂ ಮುಂದೆ ಹೋಗಿ, "ನನಗೆ ಯಾವ ಉಪಾಧಿಯೂ ಇಲ್ಲ ಸರ್ವವೂ ನಾನೇ" ಎಂಬ ಜ್ಞಾನ ಉದಿಸಿದಾಗ ಸರ್ವಾತ್ಮನಾದ ಪರಮಾತ್ಮನೇ ನಾನೆಂಬ ಅದ್ವೈತ ಜ್ಞಾನವು ಉದಯಿಸುತ್ತದೆ.

ಈ ಪ್ರಕಾರವಾಗಿರುವ ಶ್ರೀ ದಕ್ಷಿಣಾಮೂರ್ತಿಸ್ತೋತ್ರದ ಅಭಿಪ್ರಾಯವೇನೆಂಬುದನ್ನು ಸದ್ಗುರುವನ್ನು ಕೇಳಿ ತಿಳಿದುಕೊಳ್ಳಬೇಕು. ಇದರ ಅರ್ಥವನ್ನು ತಿಳಿಯಲು ಅರ್ಹನಾದ ಶಿಷ್ಯನೆಂಬುದು ಮನವರಿಕೆಯಾದರೆ, ದಯಾಶಾಲಿಯಾದ ಸದ್ಗುರುವು ವಿವರವಾಗಿ ತಿಳಿಸಿಕೊಡುತ್ತಾನೆ. ಇದನ್ನೇ

ಶಾಸ್ತ್ರದಲ್ಲಿ ಶ್ರವಣ ಎನ್ನುತ್ತಾರೆ. ಶ್ರವಣದಿಂದ ಎಲ್ಲರಿಗೂ ವಿಷಯವು ಮನವರಿಕೆಯಾಗುವುದಿಲ್ಲ. ನಾನಾ ಜನ್ಮಗಳ ವಿಷಯಭೋಗದ ನಿಮಿತ್ತದಿಂದ ಮನಸ್ಸಿನಲ್ಲಿ ಕಶ್ಮಲವು ಉಳಿದಿರುತ್ತದೆ. ಆದ್ದರಿಂದ ಗುರುವು ಹೇಳಿದ್ದನ್ನು ಮತ್ತೆ ಮತ್ತೆ ಮನನ ಮಾಡಬೇಕು. ಮನನವೆಂದರೆ ಗುರೂಪದೇಶವು ತರ್ಕಕ್ಕೆ ಹೊಂದುವುದೇ? ಎಂಬುದಾಗಿ ಪರ್ಯಾಲೋಚಿಸುವುದು. ತನ್ನ ತರ್ಕಕ್ಕೆ ಹೊಂದದೇ ಇದ್ದರೆ ಮತ್ತೆ ಗುರುವನ್ನು ಕೇಳಿ ಸಮಾಧಾನವನ್ನು ಪಡೆಯಬೇಕು. ಅನಂತರ ಅದೇ ತರ್ಕದಿಂದ ವಿಚಾರ ಮಾಡಿ ಸಂಶಯವೇನೂ ಉಳಿಯದಂತೆ ಅನುಭವದಿಂದ ಸತ್ಯವನ್ನು ದೃಢಪಡಿಸಿಕೊಳ್ಳಬೇಕು. ಅನಂತರ ಧ್ಯಾನದ ಆವಶ್ಯಕತೆ ಒದಗುತ್ತದೆ. ಏಕೆಂದರೆ ಕೇವಲ ಶ್ರವಣ ಮನನಗಳಿಂದ ಆತ್ಮಜ್ಞಾನವಾಗಿ ಬಿಡುವುದಿಲ್ಲ. ವಿಷಯಗಳ ಸಹವಾಸದಿಂದ ಜಡ್ಡುಗಟ್ಟಿ ಹೋದ ಮನಸ್ಸು ಬಡಪೆಟ್ಟಿಗೆ ಬಗ್ಗುವುದಿಲ್ಲ. ಉದಾಹರಣೆಗೆ ಒಬ್ಬನಿಗೆ ಬೀಡಿ ಸೇದುವ ಚಟವಿರುತ್ತದೆ. ವೈದ್ಯರು ಬೀಡಿಯಿಂದಾಗುವ ಕೇಡನ್ನು ತಿಳಿಸಿ ಕೊಡುತ್ತಾರೆ. ಈತನಿಗೆ ಅದು ಸತ್ಯವೆಂದು ತಿಳಿಯುತ್ತದೆ. ಆದರೂ ಸೇದುವ ಚಟವನ್ನು ತೊರೆಯಲಾರದೆ ಸೇದುತ್ತಲೇ ಇರುತ್ತಾನೆ. ಆದ್ದರಿಂದ ಮನಸ್ಸನ್ನು ಗಟ್ಟಿಮಾಡಿಕೊಂಡು ಬೀಡಿಸೇದುವುದನ್ನು ಕಡಿಮೆ ಮಾಡುತ್ತಾ ಹೋದಾಗ ಒಂದು ದಿನ ಪೂರ್ತಿಯಾಗಿ ಬಿಟ್ಟು ಹೋಗುತ್ತದೆ. ಒಂದೇ ಸಲಕ್ಕೆ ಪೂರ್ತಿಯಾಗಿ ಬಿಟ್ಟು ಬಿಡುವ ಧೀರರೂ ಇದ್ದಾರು. ಹಾಗೆಯೇ ಮನನ ಮಾತ್ರದಿಂದ ಆತ್ಮಸ್ವರೂಪವನ್ನು ನಿಶ್ಚಯಿಸಿ ಆತ್ಮಜ್ಞಾನಿಯಾಗಿ ಬಿಡುವ ಪುಣ್ಯಾತ್ಮನೂ ಇದ್ದಾನೆ. ಅಂತಹ ನಿಶ್ಚಯಕ್ಕೆ ಬರಲಾರದವರು ಪ್ರತಿದಿನ ಕೆಲವು ಘಂಟೆಗಳ ಕಾಲ ಆತ್ಮಚಿಂತನೆಯಲ್ಲಿ ಮಗ್ನರಾಗಬೇಕು.

ಗುರುವು ಆತ್ಮಸ್ವರೂಪವನ್ನು ತಿಳಿಸಿಕೊಟ್ಟಿರುತ್ತಾನಷ್ಟೆ. ಆತ್ಮನಿಗೆ ಯಾವ ಆಕೃತಿಯೂ ಇಲ್ಲವೆಂದೂ ಅವನು ಇಂದ್ರಿಯಗಳಿಗೆ ಗೋಚರನಲ್ಲವೆಂದೂ ನಮ್ಮ ಹೃದಯದಲ್ಲಿಯೇ ಆತ್ಮಸಾಕ್ಷಾತ್ಕಾರವಾಗುವುದೆಂದೂ ಹಲವಾರು ವಿಷಯಗಳನ್ನು ತಿಳಿಸಿಕೊಟ್ಟಿರುತ್ತಾನೆ. ಅದರಂತೆ ಮನಸ್ಸನ್ನು ಒಳಗೆ ಸೆಳೆದುಕೊಂಡು **ಆತ್ಮನು ನನ್ನ ಹೃದಯದಲ್ಲಿದ್ದಾನೆ** ಎಂಬುದನ್ನು ಪರ್ಯಾಲೋಚಿಸುತ್ತ ಹೋದಾಗ ನಾನೇ ಆತ್ಮನೆಂಬ ಬುದ್ಧಿಯು ಗುರ್ವನುಗ್ರಹದಿಂದ ಬಲಿತು ಸ್ಥಿರವಾಗುತ್ತದೆ. ಇದು ದೀರ್ಘಕಾಲವನ್ನು ಬಯಸಬಹುದು. ಈ ಜನ್ಮದಲ್ಲಿ ಫಲಿಸದೆಯೂ ಇರಬಹುದು. ಆದರೆ ಮಾಡಿದ ಪ್ರಯತ್ನವು ಎಳ್ಳಷ್ಟೂ ನಷ್ಟವಾಗುವುದಿಲ್ಲ. ಮುಂದಿನ ಜನ್ಮದಲ್ಲಾದರೂ ಅದು ಫಲಿಸಿಯೇ ತೀರುವುದೆಂದು ಶ್ರೀ ಕೃಷ್ಣನು

ಭಗವದ್ಗೀತೆಯಲ್ಲಿ ಹೇಳಿದ್ದಾನೆ (೬-೪೦ ರಿಂದ ೪೩)

ಸರ್ವಾತ್ಮತ್ವವು ಈ ಸ್ತೋತ್ರದ ಫಲ. ಅದರ ಅರ್ಥವೆಂದರೆ ಈ ಜಗತ್ತೆಲ್ಲವೂ ಆತ್ಮವೇ ಸರಿ. ಅಂತಹ ಆತ್ಮವೇ ನಾನು ಎಂದು. **ಆತ್ಮೈವೇದಂ ಸರ್ವಂ ಅಯಮಾತ್ಮಾ ಬ್ರಹ್ಮ** ಇತ್ಯಾದಿ ಶ್ರುತಿಗಳು ಇದನ್ನೇ ತಿಳಿಸುತ್ತವೆ. ಈ ಜ್ಞಾನ ಉಂಟಾಗುವುದಕ್ಕೆ ಮೊದಲೂ ಸಹ ಸರ್ವರೂ ಬ್ರಹ್ಮವೇ ಆಗಿರುತ್ತಾರೆ. ಆ ತಿಳಿವಳಿಕೆ ಮಾತ್ರ ಇರುವುದಿಲ್ಲ. ಅದೇ ಅಜ್ಞಾನ. ಅಜ್ಞಾನದಿಂದಲೇ ಎಲ್ಲ ಬಗೆಯ ಶೋಕ ಮೋಹ ಕಷ್ಟಗಳ ಪ್ರಾಪ್ತಿ. ಆದ್ದರಿಂದ ಗುರುಶುಶ್ರೂಷೆ ಮಾಡುತ್ತ ವೇದಾಂತವನ್ನು ಶ್ರವಣ ಮಾಡಿ ಅಜ್ಞಾನವನ್ನು ಹೋಗಲಾಡಿಸಿಕೊಳ್ಳಬೇಕೆಂದು ಈ ಸ್ತೋತ್ರದ ಸಂದೇಶವಾಗಿರುತ್ತದೆ.

ಈ ಶ್ಲೋಕದಲ್ಲಿ ಹೇಳಿದ ಮಹಾವಿಭೂತಿಯೆಂದರೆ ಈ ಸರ್ವಾತ್ಮತ್ವವೇ. ಇದರೊಡನೆ ಅಷ್ಟೈಶ್ವರ್ಯಗಳು ಪ್ರಾಪ್ತವಾಗುತ್ತವೆಯೆಂದು ಈ ಶ್ಲೋಕದಲ್ಲಿಯೇ ಫಲಶ್ರುತಿಯಿದೆ. ಇವುಗಳಿಗೆ ಅಷ್ಟಸಿದ್ಧಿಗಳೆಂದೂ ಹೆಸರಿದೆ. ಅವು ಯಾವುವೆಂದರೆ

**ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।**
**ಪ್ರಾಪ್ತಿಃ ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚಾಷ್ಟ ಸಿದ್ಧಯಃ ॥**

ಇವುಗಳ ವಿವರ ಹೀಗೆ

೧) **ಅಣಿಮಾ** – ಅತ್ಯಂತ ಸೂಕ್ಷ್ಮವಾದ ಪ್ರಾಣಿಗಳಲ್ಲಿಯೂ ಪ್ರವೇಶಿಸುವುದು. ವ್ಯಾಪಕನಾದ ಪರಮಾತ್ಮನ ಅಣಿಮಾ ಎಂಬ ಸಿದ್ಧಿ.

೨) **ಮಹಿಮಾ** – ಬ್ರಹ್ಮಾಂಡದಿಂದ ಪರಶಿವನ ಪರ್ಯಂತವಾಗಿ ಮೂವತ್ತಾರು ತತ್ತ್ವಗಳು ವ್ಯಾಪಿಸಿಕೊಂಡಿವೆ. ಅವುಗಳಲ್ಲಿಯೂ ಅವುಗಳ ಹೊರಗೂ ವ್ಯಾಪಿಸುವುದು ಮಹಿಮಾ ಎಂಬ ಸಿದ್ಧಿ.

೩) **ಲಘಿಮಾ** – ಮಹಾಮೇರುವಿನಂತೆ ಬೃಹದಾಕಾರವುಳ್ಳವನಾದರೂ ಇನ್ನೊಬ್ಬರು ಎತ್ತುವಾಗ ಹತ್ತಿಯಷ್ಟು ಹಗುರವಾಗಿ ಬಿಡುವುದು ಲಘಿಮಾ ಎಂಬ ಸಿದ್ಧಿ.

೪) **ಗರಿಮಾ** – ಪರಮಾಣುವಿನಷ್ಟು ಚಿಕ್ಕ ಗಾತ್ರವಾಗಿದ್ದರೂ ಅನ್ಯರು ಮೇಲೆತ್ತುವಾಗ ಮೇರು ಪರ್ವತದಷ್ಟು ಭಾರವಾಗುವುದು ಗರಿಮಾ ಎಂಬ ಸಿದ್ಧಿ.

೫) **ಪ್ರಾಪ್ತಿ** – ಪಾತಾಳದಲ್ಲಿದ್ದುಕೊಂಡು ಬ್ರಹ್ಮಲೋಕವನ್ನು ನೋಡಬಲ್ಲ ಶಕ್ತಿ

ಪ್ರಾಪ್ತಿ ಎಂಬ ಸಿದ್ಧಿ.

೬) **ಪ್ರಾಕಾಮ್ಯ** – ಇಚ್ಛಾಮಾತ್ರದಿಂದ ಆಕಾಶಗಮನವೇ ಮೊದಲಾದ ಅದ್ಭುತಗಳನ್ನು ಸಾಧಿಸುವುದು ಪ್ರಾಕಾಮ್ಯವೆಂಬ ಸಿದ್ಧಿ.

೭) **ಈಶಿತ್ವ** – ಇಚ್ಛಾಮಾತ್ರದಿಂದ ನಾನಾ ಲೋಕಗಳನ್ನು ಸೃಷ್ಟಿಸಿ, ರಕ್ಷಿಸಿ, ನಾಶಮಾಡಬಲ್ಲ ವಿವಿಧ ಸಿದ್ಧಿಗಳಿಗೆ ಈಶಿತ್ವವೆಂದು ಹೆಸರು.

೮) **ವಶಿತ್ವ** – ಇಂದ್ರ, ಅಗ್ನಿ ಮೊದಲಾದ ಲೋಕಪಾಲರೂ ಮತ್ತಿತರ ದಾನವಾದಿಗಳೂ ತಾನು ಹೇಳಿದಂತೆ ನಡೆಯುವಂತೆ ಮಾಡಬಲ್ಲ ಸಾಮರ್ಥ್ಯಕ್ಕೆ ವಶಿತ್ವವೆಂದು ಹೆಸರು.

ಈ ಸಿದ್ಧಿಗಳು ಯೋಗಬಲದಿಂದಲೂ ಬರಬಹುದು. ಆದರೆ ಯೋಗಬಲವು ಕ್ಷೀಣಿಸಿದಂತೆ ಈ ಸಿದ್ಧಿಗಳು ದುರ್ಬಲವಾಗುತ್ತವೆ. ಸರ್ವಾತ್ಮನಾದ ಪರಮಾತ್ಮನ ಸಿದ್ಧಿಗಳು ಮಾತ್ರ ಅವ್ಯಾಹತವಾದವುಗಳು ಎಂದರೆ ಎಂದೂ ಕ್ಷೀಣವಾಗತಕ್ಕವೇ ಅಲ್ಲ. ಅಂತಹ ಸರ್ವಾತ್ಮತ್ವವನ್ನು ಆತ್ಮಜ್ಞಾನಿಯು ಪಡೆದುಕೊಳ್ಳುತ್ತಾನೆ. ಆದ್ದರಿಂದ ವಿವೇಕಿಯಾದವನು ಸ್ವರ್ಗಾದಿ ಫಲಗಳಿಗೆ ಆಸೆ ಪಡದೆ ಆತ್ಮಜ್ಞಾನಿಯಾಗಿ ಸರ್ವಾತ್ಮನಾಗಲು ಪ್ರಯತ್ನಿಸಬೇಕು.

ಪಂಡಿತನಾದವನು ಸ್ವರ್ಗಾದಿರಾಜ್ಯವನ್ನು ಸಾಮ್ರಾಜ್ಯವೆಂದು ತಿಳಿಯುವುದಿಲ್ಲ. ಆತನಿಗೆ ಸರ್ವಾತ್ಮ ಭಾವನೆಯುಳ್ಳ ಸ್ವಾರಾಜ್ಯವೇ ಸಾಮ್ರಾಜ್ಯವಾಗಿರುತ್ತದೆ. ಇಂತಹ ಸರ್ವಾತ್ಮನ ಬಳಿಗೆ ಸಕಲಸಿದ್ಧಿಗಳೂ ಧಾವಿಸುತ್ತ ಬಂದು ದಾಸಾನುದಾಸರಂತೆ ಆತನನ್ನು ಸೇವಿಸುತ್ತವೆ.

**ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ॥**

ಯಾವಾತನಿಗೆ ಈಶ್ವರನಲ್ಲಿ ನಿರತಿಶಯವಾದ ಭಕ್ತಿ ಇದೆಯೋ ಈಶ್ವರನಲ್ಲಿರುವಂತೆ ಗುರುವಿನಲ್ಲಿಯೂ ನಿರತಿಶಯವಾದ ಭಕ್ತಿ ಇದೆಯೋ ಆ ಮಹಾತ್ಮನಿಗೆ ಇದುವರೆಗೆ ಈ ದಕ್ಷಿಣಾಮೂರ್ತಿ ಸ್ತೋತ್ರದಲ್ಲಿ ಹೇಳಿದ ವಿಷಯಗಳೆಲ್ಲವೂ ಸ್ಫುಟವಾಗಿ ಮನಸ್ಸಿಗೆ ನಾಟುವಂತೆ ತಿಳಿಯುತ್ತವೆ.

# ೪. ಶ್ರೀ ಶಿವಾಪರಾಧಕ್ಷಮಾಪಣ ಸ್ತೋತ್ರಮ್

**ಆದೌ ಕರ್ಮಪ್ರಸಂಗಾತ್ ಕಲಯತಿ ಕಲುಷಂ ಮಾತೃಕುಕ್ಷೌ ಸ್ಥಿತಂ ಮಾಂ**
**ವಿಣ್ಮೂತ್ರಾಮೇಧ್ಯಮಧ್ಯೇ ಕ್ವಥಯತಿ ನಿತರಾಂ ಜಾಠರೋ ಜಾತವೇದಾಃ।**
**ಯದ್ಯದ್ವೈ ತತ್ರ ದುಃಖಂ ವ್ಯಥಯತಿ ನಿತರಾಂ ಶಕ್ಯತೇ ಕೇನ ವಕ್ತುಂ**
**ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ।೧।**

ನಾನು ಕರ್ಮವಶನಾಗಿ ತಾಯಿಯ ಗರ್ಭದಲ್ಲಿರುವಾಗಲೇ ಪ್ರಾರಬ್ಧ ಕರ್ಮ ದೋಷವು ಮೊದಲಿಗೆ ಫಲವನ್ನು ಕೊಡಲು ಆರಂಭಿಸುತ್ತದೆ. ತಾಯಿಯ ಮಲಮೂತ್ರಗಳ ಕೊಳಕಿನ ನಡುವೆ ಸಿಕ್ಕಿಕೊಂಡಿರುವ ನನ್ನನ್ನು ಅವಳ ಜಠರಾಗ್ನಿಯು ಸುಟ್ಟು ಕುದಿಸಿಬಿಡುತ್ತದೆ. ಯಾವ ಯಾವ ಬಗೆಯ ದುಃಖವು ನನ್ನನ್ನು ಆಗ ಪೀಡಿಸುತ್ತದೆಯೆಂಬುದನ್ನು ಯಾರಿಂದ ವರ್ಣಿಸಲಾದೀತು? ಶಿವ ಶಿವ! ಹೇ ಶಂಭೋ ಮಹಾದೇವ, ನಾನು ಮಾಡಿದ ಅಪರಾಧವನ್ನು ಕ್ಷಮಿಸು.

**ಬಾಲ್ಯೇ ದುಃಖಾತಿರೇಕಾನ್ಮಲಲುಲಿತವಪುಃ ಸ್ತನ್ಯಪಾನೇ ಪಿಪಾಸುಃ**
**ನೋ ಶಕ್ತಶ್ಚೇಂದ್ರಿಯೇಭ್ಯಃ ಭವಮಲಜನಿತಾ ಜಂತವೋ ಮಾಂ ತುದಂತಿ।**
**ನಾನಾರೋಗಾತಿದುಃಖಾದ್ರುದಿತಪರವಶಃ ಶಂಕರಂ ನ ಸ್ಮರಾಮಿ**
**ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥ ೨॥**

(ಹುಟ್ಟಿದ ಮೇಲೆ) ಬಾಲ್ಯದಲ್ಲಾದರೋ ದೇಹವು ಕೊಳೆಯಿಂದ ತುಂಬಿಕೊಳ್ಳಲು ಅಳುತ್ತಲೇ ಇರುತ್ತೇನೆ. ತಾಯಿಯ ಮೊಲೆಹಾಲನ್ನು ಕುಡಿಯಬೇಕೆಂಬ ಇಚ್ಛೆಯೊಂದೇ ಇರುತ್ತದೆ. ನನ್ನ ಕೈಕಾಲು ಕಣ್ಣು ಮುಂತಾದ ಇಂದ್ರಿಯಗಳ ಮೇಲೆ ಯಾವ ಹತೋಟಿಯು ಇರುವುದಿಲ್ಲ. ಹೇ ಸ್ವಾಮಿ! ಕೊಳೆಯಲ್ಲಿ ಹುಟ್ಟಿದ ಎಷ್ಟೋ ಬಗೆಯ ಕ್ರಿಮಿ ಕೀಟಗಳು ನನ್ನನ್ನು ಕಾಡುತ್ತವೆ. ಜ್ವರ ಮುಂತಾದ ನಾನಾ ರೋಗಗಳ ಕಾಟದಿಂದ ಅಳುತ್ತಲೇ ಬರಬೇಕಾಗುತ್ತದೆ. ಆಗ ಸ್ವಾಮಿಯಾದ ಶಂಕರನನ್ನು ಧ್ಯಾನಿಸುವುದಿಲ್ಲ. ಶಿವ ಶಿವ! ಶಂಭೋ! ನನ್ನ ತಪ್ಪನ್ನು ಮನ್ನಿಸು.

**ಪ್ರೌಢೋಽಹಂ ಯೌವನಸ್ಥೋ ವಿಷಯವಿಷಧರೈಃ ಪಂಚಭಿರ್ಮರ್ಮಸಂಧೌ**
**ದಷ್ಟೋ ನಷ್ಟೋ ವಿವೇಕಃ ಸುತಧನಯುವತಿಸ್ವಾದಸೌಖ್ಯೇ ನಿಷಣ್ಣಃ ।**
**ಶೈವೇ ಚಿಂತಾವಿಹೀನಂ ಮಮ ಹೃದಯಮಹೋ ಮಾನಗರ್ವಾಧಿರೂಢಂ**
**ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥ ೩ ॥**

ಆಮೇಲೆ ನನಗೆ ಯೌವನ ಬರುತ್ತದೆ, ಪ್ರೌಢನಾಗುತ್ತೇನೆ. ಆಗಲಾದರೋ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ವಿಷ ಸರ್ಪಗಳು ನನ್ನನ್ನು ಕಚ್ಚಿ ಬಿಡುತ್ತವೆ! ಅವುಗಳ ವಿಷದಿಂದ ನನ್ನ ವಿವೇಕವು ಮಾಸಿ ಹೋಗುತ್ತದೆ. ಮಕ್ಕಳ ಲಾಲನೆ, ಹಣ, ಹೆಣ್ಣುಗಳ ಭೋಗ ಸೌಖ್ಯದಲ್ಲಿ ಮುಳುಗಿರುತ್ತೇನೆ. ಶಿವ ಭಗವಂತನ ವಿಷಯದಲ್ಲಿ ನನ್ನ ಮನಸ್ಸು ಯಾವ ಚಿಂತನೆಯನ್ನೂ ಮಾಡುವುದಿಲ್ಲ. ಅಭಿಮಾನ, ಅಹಂಕಾರ, ಗರ್ವಗಳಿಂದ ತುಂಬಿಹೋಗಿರುತ್ತದೆ. ಹೇ ಶಂಭೋ! ಶಿವ ಶಿವ! ಹೇ ಮಹಾದೇವ! ನನ್ನ ತಪ್ಪನ್ನು ಕ್ಷಮಿಸು.

**ವಾರ್ಧಕ್ಯೇ ಚೇಂದ್ರಿಯಾಣಾಂ ವಿಕಲಗತಿಮತಶ್ಚಾಧಿದೈವಾದಿತಾಪೈಃ**
**ಪ್ರಾಪ್ತೈ ರೋಗೈರ್ವಿಯೋಗೈರ್ವ್ಯಸನಕೃಶತನೋರ್ಜ್ಞಪ್ತಿಹೀನಂ ಚ ದೀನಮ್।**
**ಮಿಥ್ಯಾಮೋಹಾಭಿಲಾಷೈ ರ್ಭ್ರಮತಿ ಮಮ ಮನೋ ಧೂರ್ಜಟೇರ್ಧ್ಯಾನಶೂನ್ಯಂ**
**ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀ ಮಹಾದೇವ ಶಂಭೋ । ೪ ।**

ಇನ್ನು ಮುಪ್ಪಿನಲ್ಲಿ ನನ್ನ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಲ್ಲವೂ ಶಿಥಿಲವಾಗಿ ಚೈತನ್ಯವನ್ನು ಕಳೆದುಕೊಂಡಿರುತ್ತವೆ. ಆಧಿದೈವಿಕಾದಿತಾಪತ್ರಯಗಳಿಂದಲೂ ಬಂಧುಗಳ ರೋಗ ವಿಯೋಗಗಳಿಂದಲೂ ಬಾಧಿತನಾಗಿರುತ್ತೇನೆ. ಹೀಗೆಯೇ ನೂರಾರು ವ್ಯಸನಗಳಿಂದ ನನ್ನ ದೇಹವು ಕೃಶವಾಗಿರುತ್ತದೆ. ಇಂತಹ ನನ್ನ ಮನಸ್ಸು ವಿವೇಕಹೀನವೂ ದೀನವೂ ಆಗಿರುತ್ತದೆ. ಮಿಥ್ಯೆಯಾದ ನಾನಾ ಮೋಹಾಭಿಲಾಷೆಗಳಿಂದ ಅಲೆಯುತ್ತಿರುತ್ತದೆ. ಪರಮಾತ್ಮನಾದ ನಿನ್ನ ಧ್ಯಾನವನ್ನು ಮಾಡದೆ ಸುಮ್ಮನೆ ಅಲೆಯುತ್ತಿದೆ. ಹೇ ಶಂಭೋ ಶಂಕರ, ಶಿವ ಶಿವ ನನ್ನ ಅಪರಾಧವನ್ನು ಕ್ಷಮಿಸು.

**ಸ್ನಾತ್ವಾ ಪ್ರತ್ಯೂಷಕಾಲೇ ಸ್ನಪನವಿಧಿವಿಧೌ ನಾಹೃತಂ ಗಾಂಗತೋಯಂ**
**ಪೂಜಾರ್ಥಂ ವಾ ಕದಾಚಿದ್ ಬಹುತರಗಹನೇಽಖಂಡಬಿಲ್ವೀದಲಂ ವಾ ।**
**ನಾನೀತಾ ಪದ್ಮಮಾಲಾ ಸರಸಿ ವಿಕಸಿತಾ ಗಂಧಪುಷ್ಪೈಸ್ತ್ವದರ್ಥಂ**
**ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥ ೫ ॥**

ಹೇ ಸ್ವಾಮಿ, ಪ್ರಾತಃಕಾಲದಲ್ಲಿ ಸ್ನಾನ ಮಾಡಿ ನಿನ್ನ ಪೂಜಾವಿಧಿಯಲ್ಲಿ ಅಭಿಷೇಕ ಮಾಡುವುದಕ್ಕೋಸ್ಕರ ನಾನು ಗಂಗಾಜಲವನ್ನು ತರಲಿಲ್ಲ. ಪೂಜೆಗೋಸ್ಕರ ಬಿಲ್ವಪತ್ರೆಗಳನ್ನು ಒಂದು ದಿನವೂ ತರಲಿಲ್ಲ. ಕೊಳದಲ್ಲರಳಿದ ತಾವರೆ ಹೂಗಳ ಮಾಲೆಯನ್ನು ಕಟ್ಟಿ ತರಲಿಲ್ಲ. ಗಂಧವನ್ನು ತೇಯಲಿಲ್ಲ. ಬಿಡಿಹೂಗಳನ್ನೂ ಸಹ ತರಲಿಲ್ಲ. ಹೇ ಶಂಭೋ ಶಂಕರ, ಶಿವ ಶಿವ! ನನ್ನ ಈ ಅಪರಾಧವನ್ನು ಮನ್ನಿಸು.

**ದುಗ್ಧೈರ್ಮಧ್ವಾಜ್ಯಯುಕ್ತೈರ್ದಧಿಗುಡಸಹಿತೈಃ ಸ್ನಾಪಿತಂ ನೈವ ಲಿಂಗಂ**
**ನೋ ಲಿಪ್ತಂ ಚಂದನಾದ್ಯೈಃ ಕನಕವಿರಚಿತೈಃ ಪೂಜಿತಂ ನ ಪ್ರಸೂನೈಃ।**
**ಧೂಪೈಃ ಕರ್ಪೂರದೀಪೈರ್ವಿವಿಧರಸಯುತೈರ್ನೈವ ಭಕ್ಷೋಪಹಾರೈಃ**
**ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ । ೬ ।**

ಹಾಲು, ಜೇನು, ತುಪ್ಪ, ಮೊಸರು, ಬೆಲ್ಲ ಇವುಗಳ ಮಿಶ್ರಣಮಾಡಿ ಪಂಚಾಮೃತದಿಂದ ಶಿವಲಿಂಗಕ್ಕೆ ಅಭಿಷೇಕ ಮಾಡಲೇ ಇಲ್ಲ. ಶ್ರೀ ಚಂದನಾದಿಗಳಿಂದ ಲಿಂಗಕ್ಕೆ ಲೇಪನವನ್ನು ಮಾಡಲಿಲ್ಲ. ಸುವರ್ಣ ಪುಷ್ಪವನ್ನು ಅರ್ಪಿಸಲಿಲ್ಲ. ಧೂಪ ಕರ್ಪೂರವನ್ನು ಮಾಡಲಿಲ್ಲ. ಮಂತ್ರ ಪುಷ್ಪಗಳನ್ನರ್ಪಿಸಲಿಲ್ಲ ಹೇ ಭಗವಂತ, ಪರಮಾತ್ಮ, ಶಂಭೋ, ಮಹಾದೇವ! ನನ್ನ ಅಪರಾಧವನ್ನು ಕ್ಷಮಿಸು.

**ನೋ ಶಕ್ಯಂ ಸ್ಮಾರ್ತಕರ್ಮ ಪ್ರತಿಪದಗಹನೇ ಪ್ರತ್ಯವಾಯಾಕುಲಾಢ್ಯೇ**
**ಶ್ರೌತೇ ವಾರ್ತಾ ಕಥಂ ಮೇ ದ್ವಿಜಕುಲವಿಹಿತೇ ಬ್ರಹ್ಮಮಾರ್ಗಾನುಸಾರೇ ।**
**ತತ್ತ್ವೇ–ಜ್ಞಾತೇ ವಿಚಾರೇ ಶ್ರವಣಮನನಯೋಃ ಕಿಂ ನಿದಿಧ್ಯಾಸಿತವ್ಯಂ**
**ಕ್ಷಂತವ್ಯೋ ಮೇಽಪರಾಧಃ ಶಿವ ಶಿವ ಶಿವ ಭೋಃ ಶ್ರೀಮಹಾದೇವ ಶಂಭೋ ॥ ೭ ॥**

ಸ್ಮೃತಿವಿಹಿತವಾದ ಕರ್ಮವನ್ನು ಮಾಡಲು ಸಹ ನನಗೆ ಶಕ್ಯವಾಗಲಿಲ್ಲ. ಇನ್ನು ಶ್ರೌತಕರ್ಮವಾದರೋ ಹೆಜ್ಜೆ ಹೆಜ್ಜೆಗೂ ಕಠಿಣವಾದದ್ದು. ತಪ್ಪಿದರೆ ನಾನಾ

ದೋಷಗಳನ್ನು ಹೇಳಿದ್ದಾರೆ. ಅದು ದ್ವಿಜರಿಗೆ ವಿಹಿತವಾದದ್ದು. ಆದರೆ ಅದನ್ನು ನಾನು ಎಂದಿಗಾದರೂ ಮಾಡಬಲ್ಲೆನೇ? ಅದರ ಸುದ್ದಿಗೂ ನಾನು ಹೋಗಲಿಲ್ಲ. ವೇದ ವಿಹಿತವೂ ಸಾರಭೂತವೂ ಆದ ಪರಮಾರ್ಥವನ್ನು ನಾನು ತಿಳಿಯಲಿಲ್ಲ. ತತ್ತ್ವವನ್ನು ತಿಳಿಯದಾದಾಗ ಶ್ರವಣಮನನ ನಿದಿಧ್ಯಾಸನಗಳಿಗೆ ಅವಕಾಶವಾದರೂ ಎಲ್ಲಿ? ಹೇ ಸ್ವಾಮಿ ಶಿವ ಶಂಭೋ ಮಹಾದೇವ! ನನ್ನ ಅಪರಾಧವನ್ನು ಮನ್ನಿಸು.

**ಚಂದ್ರೋದ್ಭಾಸಿತಶೇಖರೇ ಸ್ಮರಹರೇ ಗಂಗಾಧರೇ ಶಂಕರೇ**
**ಸರ್ಪೈರ್ಭೂಷಿತಕಂಠಕರ್ಣವಿವರೇ ನೇತ್ರೋತ್ಥವೈಶ್ವಾನರೇ ।**
**ದಂತಿತ್ವಕ್ಕೃತಸುಂದರಾಂಬರಧರೇ ತ್ರೈಲೋಕ್ಯಸಾರೇ ಹರೇ**
**ಮೋಕ್ಷಾರ್ಥಂ ಕುರು ಚಿತ್ತವೃತ್ತಿಮಮಲಾಮನ್ಯೈಸ್ತು ಕಿಂ ಕರ್ಮಭಿಃ ॥ ೮ ॥**

ಎಲೈ ಮಾನವ, ಚಂದ್ರಶೇಖರನೂ ಮನ್ಮಥಾರಿಯೂ ಗಂಗಾಧರನೂ ಸುಖಪ್ರದನೂ ಕಿವಿಗಳನ್ನು ಸರ್ಪಗಳಿಂದ ಅಲಂಕರಿಸಿಕೊಂಡವನೂ ಅಗ್ನಿಮಯವಾದ ತೃತೀಯ ನೇತ್ರ ಉಳ್ಳವನೂ ಗಜಚರ್ಮಧಾರಿಯೂ ಆದ ಸದಾಶಿವನೇ ಮೂರು ಲೋಕಗಳಲ್ಲಿಯೂ ಸಾರಭೂತನಾದವನು. ಆತನಲ್ಲಿ ನಿನ್ನ ಚಿತ್ತವನ್ನು ಇಟ್ಟು ಸದಾ ಧ್ಯಾನಿಸುತ್ತಿರು. ಇತರ ಕರ್ಮಗಳಿಂದ ಪ್ರಯೋಜನವಾದರೂ ಏನು?

**ಕಿಂ ಯಾನೇನ ಧನೇನ ವಾಜಿಕರಿಭಿಃ ಪ್ರಾಪ್ತೇನ ರಾಜ್ಯೇನ ಕಿಂ**
**ಕಿಂ ವಾ ಪುತ್ರಕಲತ್ರಮಿತ್ರಪಶುಭಿರ್ದೇಹೇನ ಗೇಹೇನ ಕಿಮ್ ।**
**ಜ್ಞಾತ್ವೈತತ್ಕ್ಷಣಭಂಗುರಂ ಸಪದಿ ರೇ ತ್ಯಾಜ್ಯಂ ಮನೋ ದೂರತಃ**
**ಸ್ವಾತ್ಮಾರ್ಥಂ ಗುರುವಾಕ್ಯತೋ ಭಜ ಭಜ ಶ್ರೀ ಪಾರ್ವತೀವಲ್ಲಭಮ್ ॥ ೯ ॥**

ವಾಹನದಿಂದ ಏನಾದೀತು? ಹಣದಿಂದ ಫಲವೇನು? ಕುದುರೆ ಆನೆಗಳಿಂದ ಆಗಬೇಕಾದ್ದೇನು? ಒಂದು ರಾಜ್ಯವೇ ದೊರಕಿದರೂ ಫಲವೇನು? ಈ ಪುತ್ರ, ಕಳತ್ರ, ಮಿತ್ರ ಪಶುಗಳಿಂದಲಾದರೂ ನಿನಗಾಗುವ ಪ್ರಯೋಜನವೇನು? ಕಡೆಗೆ ಈ ದೇಹದಿಂದಾಗಲಿ ಮನೆಯಿಂದಾಗಲೀ ಯಾವ ಫಲ ದೊರಕೀತು? ಇದೆಲ್ಲವೂ ಒಂದು ಕ್ಷಣದಲ್ಲಿ ನಾಶವಾಗಿ ಹೋಗತಕ್ಕ ನಿಃಸಾರವಾದ ವಸ್ತುವೆಂದು ತಿಳಿ. ಎಲೈ ಮನಸ್ಸೇ, ಕೂಡಲೇ ಇದರ ಚಿಂತೆಯನ್ನು ದೂರಕ್ಕೆ ತಳ್ಳಿ ಹಾಕಿ, ನಿನ್ನ ಆತ್ಮದ ಶ್ರೇಯಸ್ಸಿಗಾಗಿ ಗುರುವಿನ ಉಪದೇಶವನ್ನು ಪಡೆದು ಶ್ರೀ ಪಾರ್ವತಿವಲ್ಲಭನಾದ ಪರಮಶಿವನನ್ನು ಭಜಿಸು, ಮನಸ್ಸೇ ಪರಮ ಶಿವನನ್ನು ಭಜಿಸು

**ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವನಂ**
**ಪ್ರತ್ಯಾಯಾಂತಿ ಗತಾಃ ಪುನರ್ನ ದಿವಸಾಃ ಕಾಲೋ ಜಗದ್ಭಕ್ಷಕಃ ।**
**ಲಕ್ಷ್ಮೀಸ್ತೋಯತರಂಗಭಂಗಚಪಲಾ ವಿದ್ಯುಚ್ಚಲಂ ಜೀವಿತಂ**
**ತಸ್ಮಾನ್ಮಾಂ ಶರಣಾಗತಂ ಕರುಣಯಾ ತ್ವಂ ರಕ್ಷ ರಕ್ಷಾಧುನಾ ॥ ೧೦ ॥**

ನೋಡು ನೋಡುತ್ತಿರುವಾಗಲೇ ನಮ್ಮ ಆಯುಸ್ಸು ಕಡಿಮೆಯಾಗುತ್ತಿರುವುದು. ಪ್ರತಿದಿನವೂ ಯೌವನವು ಕ್ಷಯಿಸುತ್ತಾ ಹೋಗುವುದು. ಕಳೆದ ದಿನಗಳು ಮತ್ತೆ ಬರುವುದಿಲ್ಲ. ಕಾಲ ಪುರುಷನು ಜಗತ್ತನ್ನು ತಿಂದು ಹಾಕುತ್ತಿದ್ದಾನೆ. ನೀರಿನ ಅಲೆಯು ಮರುಕ್ಷಣದಲ್ಲಿ ನಾಶವಾಗಿ ಇಲ್ಲದಿರುವಂತೆ ಲಕ್ಷ್ಮಿಯೂ ಸ್ಥಿರವಾಗಿ ನಿಲ್ಲದಿರುವ ಚಂಚಲ ಸ್ವಭಾವದವಳು. ಆದ್ದರಿಂದ, ಸ್ವಾಮಿ, ಶರಣಾಗತನಾಗಿರುವ ನನ್ನನ್ನು ನೀನೇ ಕಾಪಾಡಬೇಕು. ಈಗ ನೀನೇ ಕಾಪಾಡು.

**ಆತ್ಮಾ ತ್ವಂ ಗಿರಿಜಾ ಮತಿಃ ಪರಿಜನಾಃ ಪ್ರಾಣಾಃ ಶರೀರಂ ಗೃಹಂ**
**ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ।**
**ಸಂಚಾರಸ್ತು ಪದೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾಗಿರೋ**
**ಯದ್ಯತ್ ಕರ್ಮ ಕರೋಮಿ ತತ್ತದಧುನಾ ಶಂಭೋ ತವಾರಾಧನಮ್ ॥ ೧೧ ॥**

ಹೇ ಸ್ವಾಮಿ, ಶಂಭೋ ಶಂಕರ, ನನ್ನ ಜೀವಾತ್ಮನೇ ನೀನು. ನನ್ನ ಬುದ್ಧಿಯೇ ಪಾರ್ವತೀ ದೇವಿ. ಈ ಪಂಚ ಪ್ರಾಣಗಳು ನಿನ್ನ ಸೇವಕರು. ಈ ದೇಹವೇ ನಿನ್ನ ಗೃಹ. ನಾನು ಯಾವ ವಸ್ತುಗಳನ್ನು ಭೋಗಿಸುತ್ತೇನೆ ಆ ಭೋಗಗಳೆಲ್ಲವೂ ನಿನ್ನ ಪೂಜೆ ಎಂದು ತಿಳಿಯುತ್ತೇನೆ. ನಿದ್ರೆಯೇ ನಿನ್ನ ಧ್ಯಾನದಲ್ಲಿ ಮಗ್ನವಾದ ಸಮಾಧಿ ಸ್ಥಿತಿ. ಈ ಕಾಲುಗಳಿಂದಾಗುವ ತಿರುಗಾಟವೆಲ್ಲವೂ ನಿನಗೆ ಮಾಡುವ ಪ್ರದಕ್ಷಿಣೆ. ನಾನು ಆಡುವ ಮಾತುಗಳೆಲ್ಲವೂ ನಿನ್ನ ಸ್ತೋತ್ರಗಳೆಂದು ತಿಳಿದಿದ್ದೇನೆ. ಹೇ ಮಹಾದೇವ, ಯಾವ ಯಾವ ಕೆಲಸವನ್ನು ಮಾಡುತ್ತೇನೋ ಅದೆಲ್ಲವೂ ನಿನ್ನ ಆರಾಧನೆಗಳಾಗಲಿ.

* * * * *

**ಕರಚರಣಕೃತಂ ವಾ ಕರ್ಮ ವಾಕ್ಕಾಯಜಂ ವಾ**
**ಶ್ರವಣನಯನಜಂ ವಾ ಮಾನಸಂ ವಾಪರಾಧಮ್ ।**
**ವಿದಿತಮವಿದಿತಂ ವಾ ಸರ್ವಮೇತತ್ ಕ್ಷಮಸ್ವ**
**ಜಯ ಜಯ ಕರುಣಾಬ್ಧೇ ಶ್ರೀ ಮಹಾದೇವ ಶಂಭೋ ॥ ೧೨ ॥**

ಹೇ ಮಹಾದೇವ, ನಾನು ಕೈಗಳಿಂದ ಮಾಡಿದ ಅಪರಾಧವಾಗಿರಲಿ, ಕಾಲುಗಳಿಂದ ಮಾಡಿದ ಅಪರಾಧವಾಗಿರಲಿ, ಮಾತಿನಿಂದಲೋ ದೇಹದಿಂದಲೋ ಮಾಡಿದುದಾಗಿರಲಿ, ಕಿವಿಯಿಂದ ಕೇಳಿ ಕಣ್ಣಿಂದ ನೋಡಿ ಎಸಗಿದ ತಪ್ಪಾಗಿರಲಿ, ಅಥವಾ ಮನಸ್ಸಿನಲ್ಲಿಯೇ ಮಾಡಿದ ತಪ್ಪಾಗಿರಲಿ, ನಾನು ತಿಳಿದು ಮಾಡಿರಬಹುದು ಅಥವಾ ತಿಳಿಯದೇ ಮಾಡಿರಬಹುದು – ಅದೆಲ್ಲವನ್ನೂ, ಹೇ ಭಗವಂತ, ಕೃಪೆಯಿಟ್ಟು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ಹೇ ದಯಾಸಾಗರ, ಶ್ರೀ ಮಹಾದೇವ ಶಂಭೋ ಜಯವಾಗಲಿ ಜಯವಾಗಲಿ ।

* * * * *

# ೫. ಭಜ ಗೋವಿಂದಮ್

ಶ್ರೀ ಶಂಕರಭಗವತ್ಪಾದರು ಭಿಕ್ಷಾಟನೆ ಮಾಡುತ್ತಾ ಒಂದು ಮನೆಗೆ ಹೋದರು. ಆ ಮನೆಯಲ್ಲಿದ್ದ ಒಬ್ಬ ವೃದ್ಧನು ಪಂಡಿತನಾಗಬೇಕೆಂಬ ಬಯಕೆಯಿಂದ ಸಂಸ್ಕೃತ ವ್ಯಾಕರಣವನ್ನು ಕಲಿಯಲಾರಂಭಿಸಿದ್ದನು. ವ್ಯಾಕರಣ ಶಾಸ್ತ್ರದ ಧಾತು ಪಾಠದಲ್ಲಿ "(ಡು)ಕೃಞ್ ಕರಣೇ" ಎಂಬ ಒಂದು ಧಾತುವಿದೆ. ಆ ವೃದ್ಧನು ಅದನ್ನು ಸರಿಯಾಗಿ ಉಚ್ಚರಿಸಲಾರದೇ "ಡುಕುರುಞ್ ಕರಣೇ, ಡುಕುರುಞ್ ಕರಣೇ" ಎಂದು ಗಟ್ಟಿಯಾಗಿ ಉರು ಹಾಕುತ್ತಿದ್ದನು. ಶ್ರೀ ಶಂಕರಾಚಾರ್ಯರಿಗೆ ಅದನ್ನು ಕೇಳಿ ಮರುಕ ಉಂಟಾಯಿತು. ಈ ಮುದುಕನು ಈ ವಯಸ್ಸಿನಲ್ಲಿ ವ್ಯಾಕರಣ ಶಾಸ್ತ್ರವನ್ನು ಕಲಿತು ಪಂಡಿತನಾಗುವುದು ಯಾವಾಗ? ಉಳಿದ ಸ್ವಲ್ಪ ಆಯುಸ್ಸನ್ನು ವ್ಯರ್ಥ ಮಾಡಿಕೊಳ್ಳುತ್ತಿದ್ದಾನೆ. ಇದರ ಬದಲು ಪರಮಾತ್ಮನ ಭಜನೆಯನ್ನು ಮಾಡಬಾರದೇ ಎನಿಸಿತು. ಕೂಡಲೇ 'ಭಜಗೋವಿಂದಮ್' ಎಂಬ ಈ ಶ್ಲೋಕಗಳನ್ನು ರಚಿಸಿ ಆ ವೃದ್ಧನಿಗೆ ಹಿತೋಪದೇಶ ಮಾಡಿದರು ಎಂದು ಪೂರ್ವ ಕಥೆ ಇದೆ.

**ಭಜ ಗೋವಿಂದಂ ಭಜ ಗೋವಿಂದಂ**
**ಗೋವಿಂದಂ ಭಜ ಮೂಢಮತೇ ।**
**ಸಂಪ್ರಾಪ್ತೇ ಸನ್ನಿಹಿತೇ ಕಾಲೇ**
**ನಹಿ ನಹಿ ರಕ್ಷತಿ ಡುಕುರುಞ್ ಕರಣೇ॥ ೧ ॥**

ಗೋವಿಂದನನ್ನು ಭಜಿಸು, ಗೋವಿಂದನನ್ನು ಭಜಿಸು, ಎಲೈ ಮೂಢ, ಅಂತ್ಯ ಕಾಲವು ಸಮೀಪಿಸಿರುವಾಗ ಈ 'ಡುಕುರುಞ್ ಕರಣೇ' ನಿನ್ನನ್ನು ಎಂದಿಗೂ ರಕ್ಷಿಸುವುದಿಲ್ಲ.

**ಮೂಢ ಜಹೀಹಿ ಧನಾಗಮತೃಷ್ಣಾಂ**
**ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಂ ।**
**ಯಲ್ಲಭಸೇ ನಿಜಕರ್ಮೋಪಾತ್ತಂ**
**ವಿತ್ತಂ ತೇನ ವಿನೋದಯ ಚಿತ್ತಮ್ ॥ ೨ ॥**

ಎಲೈ ಮೂಢ, ಹಣವು ಬರಲೆಂಬ ಆಸೆಯನ್ನು ಬಿಡು, ಮನಸ್ಸಿನಲ್ಲಿರುವ ಆಸೆಯನ್ನು ತೊರೆದು ಸದ್ವಿಚಾರವನ್ನು ಮಾಡಬೇಕೆಂಬ ಬುದ್ಧಿಯನ್ನು

ತಂದುಕೋ. ನೀನು ಮಾಡುವ ಕೆಲಸದಿಂದ ಎಷ್ಟು ಹಣ ನಿನಗೆ ದೊರೆಯುತ್ತದೆಯೋ ಅಷ್ಟನ್ನು ಬಳಸಿ ಮನಸ್ಸಿಗೆ ತೃಪ್ತಿಯನ್ನು ತಂದುಕೋ.

**ನಾರೀಸ್ತನಭರನಾಭೀದೇಶಂ**
**ದೃಷ್ಟ್ವಾ ಮಾ ಗಾ ಮೋಹಾವೇಶಂ ।**
**ಏತನ್ಮಾಂಸವಸಾದಿವಿಕಾರಂ**
**ಮನಸಿ ವಿಚಿಂತಯ ವಾರಂ ವಾರಮ್ ॥ ೩ ॥**

ಸ್ತ್ರೀಯರ ಸ್ತನಗಳನ್ನು ನಾಭಿ ಪ್ರದೇಶವನ್ನು ನೋಡಿ ಮೋಹಾವಿಷ್ಟನಾಗಬೇಡ. ಅದೆಲ್ಲವೂ ಮಾಂಸ, ಕೊಬ್ಬು ಮುಂತಾದವುಗಳ ವಿಕಾರವೆಂದು ಮನಸ್ಸಿನಲ್ಲಿ ಮತ್ತೆ ಮತ್ತೆ ಗುಣಿಸಿ ನೋಡು.

**ನಲಿನೀದಲಗತಜಲಮತಿತರಲಂ**
**ತದ್ವಜ್ಜೀವಿತಮತಿಶಯ ಚಪಲಂ ।**
**ವಿದ್ಧಿ ವ್ಯಾಧ್ಯಭಿಮಾನಗ್ರಸ್ತಂ**
**ಲೋಕಂ ಶೋಕಹತಂ ಚ ಸಮಸ್ತಮ್ ॥ ೪ ॥**

ತಾವರೆಗಿಡದ ಎಲೆಯ ಮೇಲಿನ ನೀರು ಒಂದೆಡೆ ನಿಲ್ಲದೆ ಬಹುಬೇಗನೆ ಜಾರುತ್ತದೆ. ಹಾಗೆಯೇ ಮನುಷ್ಯನ ಜೀವಿತವು ಅತ್ಯಂತ ಚಂಚಲ. ಯಾವ ಕ್ಷಣದಲ್ಲಾದರೂ ಜಾರಿ ಹೋಗಬಹುದು. ಈ ಲೋಕವು ರೋಗ ದುರಂಹಕಾರಗಳಿಂದ ತುಂಬಿದೆಯೆಂದೂ ಸಮಸ್ತರೂ ಒಂದಲ್ಲ ಒಂದು ಶೋಕದಿಂದ ನರಳುತ್ತಿದ್ದಾರೆಂದೂ ತಿಳಿದುಕೋ.

**ಯಾವದ್ವಿತ್ತೋಪಾರ್ಜನಸಕ–**
**ಸ್ತಾವನ್ನಿಜಪರಿವಾರೋ ರಕ್ತಃ ।**
**ಪಶ್ಚಾಜ್ಜೀವತಿ ಜರ್ಜರದೇಹೇ**
**ವಾರ್ತಾಂ ಕೋಪಿ ನ ಪೃಚ್ಛತಿ ಗೇಹೇ ॥ ೫ ॥**

ನೀನು ಧನ ಸಂಪಾದನೆಯಲ್ಲಿ ತೊಡಗಿರುವವರೆಗೆ ನಿನ್ನ ಕುಟುಂಬದವರು ನಿನ್ನನ್ನು ಪ್ರೀತಿಯಿಂದ ಆದರಿಸುತ್ತಾರೆ. ಆಮೇಲೆ ಹಣವನ್ನು ಸಂಪಾದಿಸಲಾರದೆ ಮುದಿತನದಿಂದ ದೇಹವು ಜರ್ಜರಿತವಾಗುತ್ತದೆ. ಆಗ ಮನೆಯಲ್ಲಿರುವ ಯಾರೂ ನಿನ್ನ ಸುದ್ದಿಯನ್ನೂ ವಿಚಾರಿಸದೆ ದೂರವಾಗಿ ಬಿಡುತ್ತಾರೆ

**ಯಾವತ್ಪವನೋ ನಿವಸತಿ ದೇಹೇ**
**ತಾವತ್ಪೃಚ್ಛತಿ ಕುಶಲಂ ಗೇಹೇ ।**
**ಗತವತಿ ವಾಯೌ ದೇಹಾಪಾಯೇ**
**ಭಾರ್ಯಾ ಬಿಭ್ಯತಿ ತಸ್ಮಿನ್ಕಾಯೇ ॥ ೬ ॥**

ಎಲ್ಲಿಯವರೆಗೆ ದೇಹದಲ್ಲಿ ಪ್ರಾಣವಾಯು ಇರುತ್ತದೆಯೋ ಅಲ್ಲಿಯವರೆಗೆ ನಿನ್ನ ದೇಹಸ್ಥಿತಿ ಹೇಗಿದೆಯೆಂದು ಕುಶಲವನ್ನು ಮನೆಯಲ್ಲಿ ವಿಚಾರಿಸಬಹುದು. ಯಾವಾಗ ಪ್ರಾಣವಾಯು ದೇಹದಿಂದ ಹೊರಟು ಹೋಗುತ್ತದೆಯೋ ಆಗ ಆ ದೇಹದ ಬಳಿಗೆ ಬರಲು ಹೆಂಡತಿಯರು ಸಹ ಹೆದರುತ್ತಾರೆ.

**ಬಾಲಸ್ತಾವತ್ಕ್ರೀಡಾಸಕ್ತ**
**ಸ್ತರುಣಸ್ತಾವತ್ತರುಣೀಸಕ್ತಃ ।**
**ವೃದ್ಧಸ್ತಾವಚ್ಚಿಂತಾಸಕ್ತಃ**
**ಪರಮೇ ಬ್ರಹ್ಮಣಿ ಕೋಽ ಪಿ ನ ಸಕ್ತಃ ॥ ೭ ॥**

ಹುಡುಗನಿಗಾದರೋ ಆಟದಲ್ಲಿ ಆಸಕ್ತಿ. ಯುವಕನಿಗೆ ತರುಣಿಯರಲ್ಲಿ ಆಸಕ್ತಿ. ಮುದುಕನು ಯಾವುದೋ ಒಂದು ಚಿಂತೆಯಲ್ಲಿ ಮುಳುಗಿರುತ್ತಾನೆ. ಏವಂಚ ಪರಬ್ರಹ್ಮದ ವಿಷಯದಲ್ಲಿ ಯಾರಿಗೂ ಆಸಕ್ತಿ ಇಲ್ಲ!.

**ಕಾ ತೇ ಕಾಂತಾ ಕಸ್ತೇ ಪುತ್ರಃ**
**ಸಂಸಾರೋಽಯಮತೀವ ವಿಚಿತ್ರಃ ।**
**ಕಸ್ಯ ತ್ವಂ ಕಃ ಕುತ ಆಯಾತ–**
**ಸ್ತತ್ತ್ವಂ ಚಿಂತಯ ತದಿಹ ಭ್ರಾತಃ ॥ ೮ ॥**

ಈ ಸಂಸಾರವು ಅತೀವ ವಿಚಿತ್ರವಾದದ್ದು. ನಿನ್ನ ಕಾಂತೆ ಎಂದು ಕೊಳ್ಳುವೆಯಲ್ಲ, ಅವಳು ಯಾರು? ನನ್ನ ಪುತ್ರ ಎಂದುಕೊಳ್ಳುವೆಯಲ್ಲ ಅವನು ಮೂಲದಲ್ಲಿ ಯಾವನಾಗಿದ್ದ? ನೀನಾದರೂ ಯಾರು? ಯಾರ ಮಗ? ಎಲ್ಲಿಂದ ಇಲ್ಲಿಗೆ ಏಕೆ ಬಂದಿರುವೆ? ಎಲೈ ಸೋದರನೇ. ಈ ವಿಷಯದಲ್ಲಿ ಸತ್ಯಸ್ಥಿತಿ ಏನೆಂಬುದನ್ನು ಆಲೋಚಿಸಿ ನೋಡು.

ಸತ್ಸಂಗತ್ವೇ ನಿಸ್ಸಂಗತ್ವಂ
ನಿಸ್ಸಂಗತ್ವೇ ನಿರ್ಮೋಹತ್ವಂ ।
ನಿರ್ಮೋಹತ್ವೇ ನಿಶ್ಚಲತತ್ತ್ವಂ
ನಿಶ್ಚಲತತ್ತ್ವೇ ಜೀವನ್ಮುಕ್ತಿಃ ॥ ೯ ॥

ಸಜ್ಜನರ ಸಂಪರ್ಕದಲ್ಲಿದ್ದರೆ ಧನಾದಿ ವಿಷಯಗಳ ಚಿಂತೆ ತಪ್ಪುತ್ತದೆ. ಈ ಚಿಂತೆ ಹೋದಾಗ ಅವುಗಳ ಮೋಹವೂ ಹೋಗುತ್ತದೆ. ಅಜ್ಞಾನದಿಂದಾದ ಮೋಹವು ಹೋದರೆ ಶಾಶ್ವತವಾದ ಸತ್ಯವೇನೆಂಬುದರ ಜ್ಞಾನವಾಗುತ್ತದೆ. ಅಂತಹ ಜ್ಞಾನ ಉದಿಸಿದರೆ ಜೀವನ್ಮುಕ್ತಿಯೇ ಪ್ರಾಪ್ತವಾಯಿತೆಂದು ತಿಳಿಯಬೇಕು.

ವಯಸಿ ಗತೇ ಕಃ ಕಾಮವಿಕಾರಃ
ಶುಷ್ಕೇ ನೀರೇ ಕಃ ಕಾಸಾರಃ ।
ಕ್ಷೀಣೇ ವಿತ್ತೇ ಕಃ ಪರಿವಾರೋ
ಜ್ಞಾತೇ ತತ್ತ್ವೇ ಕಃ ಸಂಸಾರಃ ॥ ೧೦ ॥

ವಯಸ್ಸು ಕಳೆದು ಹೋದ ಮೇಲೆ ಕಾಮವಿಕಾರವೆಲ್ಲಿರುತ್ತದೆ? ನೀರು ಒಣಗಿದ ಮೇಲೆ ಕೆರೆಯೆಂದರೆ ಯಾವುದು? ಹಣವು ಕ್ಷೀಣಿಸಿ ಇಲ್ಲವಾದಾಗ ಸಂಸಾರದ ಪರಿವಾರವೆಲ್ಲಿರುತ್ತದೆ? ತತ್ತ್ವಜ್ಞಾನವಾದಾಗ ಈ ಸಂಸಾರ ಎಲ್ಲಿದ್ದೀತು?

ಮಾ ಕುರು ಧನಜನಯೌವನಗರ್ವಂ
ಹರತಿ ನಿಮೇಷಾತ್ಕಾಲಃ ಸರ್ವಂ ।
ಮಾಯಾಮಯಮಿದಮಖಿಲಂ ಬುದ್ಧ್ವಾ
ಬ್ರಹ್ಮಪದಂ ತ್ವಂ ಪ್ರವಿಶ ವಿದಿತ್ವಾ ॥ ೧೧ ॥

ಎಲೈ ಮಾನವ, "ನನಗೆ ಧನಬಲವಿದೆ, ಜನಬಲವಿದೆ, ಯೌವನವಿದೆ" ಎಂದು ಗರ್ವಪಡಬೇಡ. ಒಂದು ನಿಮಿಷದಲ್ಲಿ ಕಾಲವು ಇದೆಲ್ಲವನ್ನು ನಾಶ ಮಾಡಬಲ್ಲದು. ಇದೆಲ್ಲವೂ ಮಾಯಾ ಕಲ್ಪಿತವಾದದ್ದು (ವಸ್ತುತಃ ಇಲ್ಲ) ಎಂದು ನಿಶ್ಚಯಿಸಿ, (ಶಾಶ್ವತವಾದ) ಬ್ರಹ್ಮವೆಂದರೇನೆಂಬುದನ್ನರಿತು ಅದರಲ್ಲಿ ಸೇರಿಕೋ.

**ದಿನಯಾಮಿನ್ಯೌ ಸಾಯಂ ಪ್ರಾತಃ**
**ಶಿಶಿರವಸಂತೌ ಪುನರಾಯಾತಃ ।**
**ಕಾಲಃಕ್ರೀಡತಿ ಗಚ್ಛತ್ಯಾಯು-**
**ಸ್ತದಪಿ ನ ಮುಂಚತ್ಯಾಶಾವಾಯುಃ ॥ ೧೨ ॥**

ಹಗಲು, ರಾತ್ರಿ, ಸಂಜೆ, ಪ್ರಾತಃಕಾಲ ಶಿಶಿರಋತು, ವಸಂತಋತು ಮುಂತಾದೆಲ್ಲವೂ ಬರುತ್ತವೆ, ಹೋಗುತ್ತವೆ. ಇದು ಕಾಲಪುರುಷನ ಒಂದು ಆಟ. ಈ ಆಟದ ಹೆಸರಿನಲ್ಲಿ ಮನುಷ್ಯನ ಆಯಸ್ಸು ಕಳೆದುಹೋಗುತ್ತದೆ. ಇದೆಲ್ಲ ತಿಳಿದಿದ್ದರೂ ಆಸೆಯೆಂಬ ವಾತರೋಗವು ಬಿಟ್ಟು ಹೋಗುವುದೇ ಇಲ್ಲ.

**ಕಾ ತೇ ಕಾಂತಾ ಧನಗತಚಿಂತಾ**
**ವಾತುಲ ಕಿಂ ತವ ನಾಸ್ತಿ ನಿಯಂತಾ ।**
**ತ್ರಿಜಗತಿ ಸಜ್ಜನಸಂಗತಿರೇಕಾ**
**ಭವತಿ ಭವಾರ್ಣವತರಣೇ ನೌಕಾ ॥ ೧೩ ॥**

ಎಲೈ ವಾತರೋಗಿ, ನಿನಗೆ ಪ್ರಿಯಳಾದ ಮಡದಿ ಯಾರು? ಏನು ಮಾಡಿಯಾಳು? ಇನ್ನೂ ಹಣದ ಆಸೆ ಏಕೆ? ನಿನಗೆ ಬುದ್ಧಿ ಹೇಳಿ ದಾರಿ ತೋರಿಸತಕ್ಕವರಿಲ್ಲವೇನು? ಮೂರು ಲೋಕಗಳಲ್ಲಿ ಹುಡುಕಿದರೂ ಸತ್ಸಂಗವೆಂಬುದೊಂದೇ ಸಂಸಾರಸಾಗರವನ್ನು ದಾಟಿಸಬಲ್ಲ ದೋಣಿಯಾಗಿರುತ್ತದೆ.

**ಜಟಿಲೋ ಮುಂಡೀ ಲುಂಚಿತಕೇಶಃ**
**ಕಾಷಾಯಾಂಬರಬಹುಕೃತವೇಷಃ ।**
**ಪಶ್ಯನ್ನಪಿ ಚ ನ ಪಶ್ಯತಿ ಮೂಢಃ**
**ಉದರನಿಮಿತ್ತಂ ಬಹುಕೃತವೇಷಃ ॥ ೧೪ ॥**

ಒಬ್ಬನು ಜಟೆಬಿಟ್ಟವನು, ಇನ್ನೊಬ್ಬನು ತಲೆಬೋಳಿಸಿಕೊಂಡವನು, ಮತ್ತೊಬ್ಬನು ಕೇಶವನ್ನು ಎಳೆದೆಳೆದು ಕಿತ್ತುಹಾಕಿಕೊಂಡವನು, ಮಗದೊಬ್ಬನು ಕಾವಿ ಬಟ್ಟೆಯನ್ನುಟ್ಟು ಬಹುವಿಧವಾಗಿ ಅಲಂಕರಿಸಿಕೊಂಡವನು. ಕಣ್ಣಿಂದ ಕಾಣುತ್ತಿದ್ದರೂ ಸತ್ಯವನ್ನು ಕಾಣಲಾರದ ಇಂತಹ ಮೂಢರಿದ್ದಾರೆ. ಇವರು ಹೊಟ್ಟೆಪಾಡಿಗಾಗಿ ಇಂತಹ ನಾನಾ ವೇಷವನ್ನು ಧರಿಸಿರುತ್ತಾರೆ.

**ಅಂಗಂ ಗಲಿತಂ ಪಲಿತಂ ಮುಂಡಂ**
**ದಶನವಿಹೀನಂ ಜಾತಂ ತುಂಡಂ ।**
**ವೃದ್ಧೋ ಯಾತಿ ಗೃಹೀತ್ವಾ ದಂಡಂ**
**ತದಪಿ ನ ಮುಂಚಾತ್ಯಾಶಾಪಿಂಡಮ್ ॥ ೧೫ ॥**

ವಯಸ್ಸಾದ ಮೇಲೆ ಅವಯವವು ಬಲಹೀನವಾಗಿರುತ್ತದೆ. ಕೂದಲು ನೆರೆತು ತಲೆಯು ಬೆಳ್ಳಗಾಗಿರುತ್ತದೆ. ಬಾಯಿಯಲ್ಲಿದ್ದ ಹಲ್ಲುಗಳೆಲ್ಲ ಉದುರಿಹೋಗಿರುತ್ತವೆ. ಇಷ್ಟಾದರೂ ಮುದುಕನು ದೊಣ್ಣೆಯನ್ನು ಹಿಡಿದು ಎಲ್ಲಿಗೋ ಹೋಗುತ್ತಲೇ ಇರುತ್ತಾನೆ. ವಯಸ್ಸಾದರೂ ಆಶಾಪಿಂಡವು (ಆಶೆಯು) ಶರೀರವನ್ನು ಬಿಟ್ಟು ಹೋಗುವುದಿಲ್ಲ.

**ಅಗ್ರೇ ವಹ್ನಿಃ ಪೃಷ್ಠೇ ಭಾನುಃ**
**ರಾತ್ರೌ ಚುಬುಕಸಮರ್ಪಿತಜಾನುಃ ।**
**ಕರತಲಭಿಕ್ಷಸ್ತರುತಲವಾಸ–**
**ಸ್ತದಪಿ ನ ಮುಂಚತ್ಯಾಶಾಪಾಶಃ ॥ ೧೬ ॥**

ಚಳಿಯನ್ನು ತಡೆಯಲಾರದೆ ಎದುರಿಗೆ ಬೆಂಕಿಯನ್ನು ಹಾಕಿಕೊಂಡು ಮೈಯನ್ನು ಕಾಯಿಸುತ್ತಾನೆ. ಸೂರ್ಯನ ಕಡೆಗೆ ಬೆನ್ನು ಮಾಡಿ ಬಿಸಿಲು ಕಾಯಿಸುತ್ತಾನೆ, ರಾತ್ರಿಯಲ್ಲಿ ಮೊಳಕಾಲು ಗಡ್ಡವನ್ನು ಮುಟ್ಟುವಂತೆ ಬಾಗಿ ಮಲಗುತ್ತಾನೆ. ಭಿಕ್ಷಾಪಾತ್ರೆಯೂ ಇಲ್ಲದ್ದರಿಂದ ಒಬ್ಬನು ಕೈಯಲ್ಲಿಯೇ ಭಿಕ್ಷೆ ಬೇಡಿ ತಿನ್ನುತ್ತಾನೆ. ಮರದ ಬುಡದಲ್ಲಿ ಮಲಗುತ್ತಾನೆ. ಇಷ್ಟಾದರೂ ಆಸೆಯೆಂಬ ವಾತರೋಗವು ಇವನನ್ನು ಬಿಡುವುದೇ ಇಲ್ಲವಲ್ಲ!

**ಕುರುತೇ ಗಂಗಾಸಾಗರಗಮನಂ**
**ವ್ರತಪರಿಪಾಲನಮಥವಾ ದಾನಂ ।**
**ಜ್ಞಾನವಿಹೀನಃ ಸರ್ವಮತೇನ**
**ಭಜತಿ ನ ಮುಕ್ತಿಂ ಜನ್ಮಶತೇನ ॥ ೧೭ ॥**

ಮೋಕ್ಷವನ್ನು ಪಡೆಯುವುದಕ್ಕಾಗಿ ಕೆಲವರು ಗಂಗಾನದಿಗೆ ಹೋಗಿ ಸ್ನಾನ ಮಾಡುತ್ತಾರೆ. ಸಮುದ್ರ ಸ್ನಾನ ಮಾಡುತ್ತಾರೆ! ನಾನಾ ಬಗೆಯ ವ್ರತಗಳನ್ನು ಮಾಡುತ್ತಾರೆ, ದಾನ ಕೊಡುತ್ತಾರೆ. ಆದರೆ ಆತ್ಮಜ್ಞಾನವಿಲ್ಲದೆ ನೂರು ಜನ್ಮಗಳನ್ನು ಕಳೆದರೂ ಅವರಿಗೆ ಮೋಕ್ಷವು ಸಿಗುವುದಿಲ್ಲ. ಜ್ಞಾನ ಒಂದೇ ಮೋಕ್ಷಕ್ಕೆ ಸಾಧನ.

ಇದು ಎಲ್ಲ ಉಪನಿಷತ್ತುಗಳ ಸಿದ್ಧಾಂತ.

**ಯೋಗರತೋ ವಾ ಭೋಗರತೋ ವಾ**
**ಸಂಗರತೋ ವಾ ಸಂಗವಿಹೀನಃ ।**
**ಯಸ್ಯ ಬ್ರಹ್ಮಣಿ ರಮತೇ ಚಿತ್ತಂ**
**ನಂದತಿ ನಂದತಿ ನಂದತ್ಯೇವ ॥ ೧೮ ॥**

ಒಬ್ಬನು ಯೋಗಿಯಾಗಿರಲಿ, ಭೋಗಿಯಾಗಿರಲಿ, ಸತ್ಸಂಗದಲ್ಲಿ ಇರಲಿ ಅಥವಾ ಸಂಗರಹಿತನಾಗಿರಲಿ, ಯಾವಾತನ ಚಿತ್ತವು ಬ್ರಹ್ಮಚಿಂತನೆಯಲ್ಲಿ ನಿರತವಾಗಿರುವುದೋ ಆತನು ಆನಂದದಲ್ಲಿ ಮುಳುಗುತ್ತಾನೆ. ಆನಂದದಲ್ಲಿರುತ್ತಾನೆ, ಆನಂದಿಸುತ್ತಲೇ ಇರುತ್ತಾನೆ, ಇದು ನಿಶ್ಚಿತ.

**ಭಗವದ್ಗೀತಾ ಕಿಂಚಿದಧೀತಾ**
**ಗಂಗಾಜಲ ಲವ ಕಣಿಕಾ ಪೀತಾ ।**
**ಸಕೃದಪಿ ಯೇನ ಮುರಾರಿಸಮರ್ಚಾ**
**ಕ್ರಿಯತೇ ತಸ್ಯ ಯಮೇನ ನ ಚರ್ಚಾ ॥ ೧೯ ॥**

ಭಗವದ್ಗೀತೆಯನ್ನು ಸ್ವಲ್ಪ ಅಧ್ಯಯನ ಮಾಡಿದರೂ ಸಾಕು, ಗಂಗಾಜಲದ ಒಂದು ಹನಿಯನ್ನು ಕುಡಿದರೆ ಸಾಕು, ಶ್ರೀಮನ್ನಾರಾಯಣನನ್ನು ಒಂದು ಸಲ ಪೂಜಿಸಿದರೆ ಸಾಕು, ಆತನ ವಿಷಯಲ್ಲಿ ಯಮನು ಯಾವ ಚರ್ಚೆಯನ್ನೂ ಮಾಡುವುದಿಲ್ಲ. (ಯಮನಿಂದ ಅವನಿಗೆ ಯಾವ ಬಾಧೆಯು ಇರುವುದಿಲ್ಲ).

**ಪುನರಪಿ ಜನನಂ ಪುನರಪಿ ಮರಣಂ**
**ಪುನರಪಿ ಜನನೀಜಠರೇ ಶಯನಂ ।**
**ಇಹ ಸಂಸಾರೇ ಬಹುದುಸ್ತಾರೇ**
**ಕೃಪಯಾಽಪಾರೇ ಪಾಹಿ ಮುರಾರೇ ॥ ೨೦ ॥**

ಮತ್ತೆ ಹುಟ್ಟುವುದು, ಮತ್ತೆ ಸಾಯುವುದು, ಮತ್ತೆ ತಾಯಿಯ ಗರ್ಭದಲ್ಲಿ ಸೇರಿ ಮಲಗುವುದು – ಈ ರೀತಿಯಲ್ಲಿರುವ ಸಂಸಾರಕ್ಕೆ ಪಾರವೇ ಇಲ್ಲ. ಇದನ್ನು ಸುಲಭವಾಗಿ ದಾಟಲಾಗುವುದಿಲ್ಲ, ಹೇ ಮುರಾರಿ, ನಾರಾಯಣ, ಕೃಪೆಯಿಟ್ಟು ನನ್ನನ್ನು ಪಾಲಿಸು.

**ಕಸ್ತ್ವಂ ಕೋಽಹಂ ಕುತ ಆಯಾತಃ**
**ಕಾ ಮೇ ಜನನೀ ಕೋ ಮೇ ತಾತಃ ।**
**ಇತಿ ಪರಿಭಾವಯ ಸರ್ವಮಸಾರಂ**
**ವಿಶ್ವಂ ತ್ಯಕ್ತ್ವಾ ಸ್ವಪ್ನವಿಚಾರಮ್ ॥ ೨೧ ॥**

ನೀನು ಯಾರು? ನಾನು ಯಾರು? ಎಲ್ಲಿಂದ ಏಕೆ ಬಂದಿದ್ದೀಯೆ? ಯಾರು ನನ್ನ ತಾಯಿ? ಯಾರು ನನ್ನ ತಂದೆ? – ಎಂಬುದನ್ನು ಸರಿಯಾಗಿ ವಿಚಾರ ಮಾಡಿ ನೋಡು. ಈ ವಿಶ್ವವೆಲ್ಲವೂ ನಿಸ್ಸಾರವಾದ ಸ್ವಪ್ನದ ವಿಚಾರವೇ ಎಂದು ತಿಳಿದು ದೂರವಿಟ್ಟು ಪರ್ಯಾಲೋಚಿಸು.

**ತ್ವಯಿ ಮಯಿ ಚಾನ್ಯತ್ರೈಕೋ ವಿಷ್ಣುಃ**
**ವ್ಯರ್ಥಂ ಕುಪ್ಯಸಿ ಮಯ್ಯಸಹಿಷ್ಣುಃ ।**
**ಭವ ಸಮಚಿತ್ತಃ ಸರ್ವತ್ರ ತ್ವಂ**
**ವಾಂಛಸ್ಯಚಿರಾದ್ಯದಿ ವಿಷ್ಣುತ್ವಮ್ ॥ ೨೨ ॥**

ನಿನ್ನಲ್ಲಿ ನನ್ನಲ್ಲಿ ಅನ್ಯತ್ರ ಎಲ್ಲೆಲ್ಲಿಯೂ ಒಬ್ಬನೇ ವಿಷ್ಣುವಿದ್ದಾನೆ. ಸಹನೆಯನ್ನು ಕಳೆದುಕೊಂಡು ವ್ಯರ್ಥವಾಗಿ ನನ್ನ ಮೇಲೆ ಕೋಪಿಸಿಕೊಳ್ಳುತ್ತೀಯೆ. ಎಲೈ ಮಾನವ, ಶೀಘ್ರವಾಗಿ ನೀನೇ ವಿಷ್ಣುವಾಗಬೇಕೆಂಬ ಬಯಕೆ ಇದ್ದರೆ, ಸರ್ವತ್ರ ವಿಷ್ಣು ಒಬ್ಬನೇ ಇದ್ದಾನೆಂದು ತಿಳಿದು ಸಮಚಿತ್ತನಾಗು.

**ಶತ್ರೌ ಮಿತ್ರೇ ಪುತ್ರೇ ಬಂಧೌ**
**ಮಾ ಕುರು ಯತ್ನಂ ವಿಗ್ರಹಸಂಧೌ ।**
**ಸರ್ವಸ್ಮಿನ್ನಪಿ ಪಶ್ಯಾತ್ಮಾನಂ**
**ಸರ್ವತ್ರೋತ್ಸೃಜ ಭೇದಜ್ಞಾನಮ್ ॥ ೨೩ ॥**

ಶತ್ರು, ಮಿತ್ರ, ಪುತ್ರ, ಬಂಧು, ಮೊದಲಾದವರಲ್ಲಿ ಭೇದ ಭಾವನೆಯಿಂದ ಕಲಹ, ಸಂಧಾನಗಳಲ್ಲಿ ಯತ್ನಿಸಬೇಡ. ಎಲ್ಲದರಲ್ಲಿಯೂ ನಾನೇ ಆತ್ಮನಾಗಿ ಇದ್ದೇನೆ ಎಂಬುದನ್ನು ತಿಳಿದುಕೋ. ಸರ್ವ ವಸ್ತುಗಳಲ್ಲಿಯೂ ಭೇದ ಬುದ್ಧಿಯನ್ನು ತೊಡೆದು ಹಾಕು.

**ಕಾಮಂ ಕ್ರೋಧಂ ಲೋಭಂ ಮೋಹಂ**
**ತ್ಯಕ್ತ್ವಾಽತ್ಮಾನಂ ಪಶ್ಯತಿ ಸೋಽಹಂ ।**
**ಆತ್ಮಜ್ಞಾನವಿಹೀನಾ ಮೂಢಾ-**
**ಸ್ತೇ ಪಚ್ಯಂತೇ ನರಕನಿಗೂಢಾಃ ॥ ೨೪ ॥**

ವಿವೇಕಿಯಾದವನು ಕಾಮ, ಕ್ರೋಧ, ಲೋಭ, ಮೋಹಗಳನ್ನು ತೊಡೆದು ಹಾಕಿ ಸರ್ವತ್ರ ಆತ್ಮನೊಬ್ಬನೇ ಇದ್ದಾನೆಂದೂ ಅವನೇ ನಾನು ಎಂದೂ ತಿಳಿದು 'ಸೋಽಹಂ' ಎಂದೇ ನಿಶ್ಚಯಿಸುತ್ತಾನೆ. ಆತ್ಮಜ್ಞಾನವನ್ನು ಪಡೆಯದೇ ಇರುವ ಮೂಢ ಜನರು ನರಕದಲ್ಲಿ ಬಿದ್ದು ಯಾತನೆಗಳನ್ನು ಅನುಭವಿಸುತ್ತಾರೆ.

**ಗೇಯಂ ಗೀತಾನಾಮಸಹಸ್ರಂ**
**ಧ್ಯೇಯಂ ಶ್ರೀಪತಿರೂಪಮಜಸ್ರಮ್ ।**
**ನೇಯಂ ಸಜ್ಜನಸಂಗೇ ಚಿತ್ತಂ**
**ದೇಯಂ ದೀನಜನಾಯ ಚ ವಿತ್ತಮ್ ॥ ೨೫ ॥**

ಭಗವದ್ಗೀತೆಯನ್ನು ಭಗವಂತನ ಸಹಸ್ರನಾಮಗಳನ್ನು ಹಾಡಿ ಪಾರಾಯಣ ಮಾಡುತ್ತಿರಬೇಕು. ಶ್ರೀ ಹರಿಯ ದಿವ್ಯ ರೂಪವನ್ನು ಸತತವೂ ಧ್ಯಾನಿಸುತ್ತಿರಬೇಕು. ಸಜ್ಜನರ ಸಹವಾಸದಲ್ಲಿರುವಂತೆ ಮನಸ್ಸನ್ನು ಪ್ರೇರಿಸಬೇಕು. ದೀನ ಜನರಿಗೆ ಹಣದ ಸಹಾಯವನ್ನು ಮಾಡಬೇಕು.

**ಅರ್ಥಮನರ್ಥಂ ಭಾವಯ ನಿತ್ಯಂ**
**ನಾಸ್ತಿ ತತಃ ಸುಖಲೇಶಃ ಸತ್ಯಮ್ ।**
**ಪುತ್ರಾದಪಿ ಧನಭಾಜಾಂ ಭೀತಿಃ**
**ಸರ್ವತ್ರೈಷಾ ವಿಹಿತಾ ರೀತಿಃ॥ ೨೬ ॥**

ಧನವು ಅನರ್ಥಕಾರಿಯೆಂದು ಸದಾ ಭಾವಿಸುತ್ತಿರು. ಧನದಿಂದ ಸುಖಲೇಶವೂ ಸತ್ಯವಾಗಿ ಇಲ್ಲ. ಹಣವಿದ್ದವರಿಗೆ ತಮ್ಮ ಮಗನಿಂದಲೂ ಸಹ ವಿಪತ್ತು ಬಂದೀತೆಂಬ ಭಯವಿರುತ್ತದೆ. ಈ ಪರಿಸ್ಥಿತಿಯು ಸರ್ವತ್ರ ಇರತಕ್ಕದ್ದೇ ಸರಿ.

**ಪ್ರಾಣಾಯಾಮಂ ಪ್ರತ್ಯಾಹಾರಂ,**
**ನಿತ್ಯಾನಿತ್ಯವಿವೇಕವಿಚಾರಮ್ ।**
**ಜಪವಿಧಿಸಹಿತ ಸಮಾಧಿವಿಧಾನಂ**
**ಕುರ್ವವಧಾನಂ ಮಹದವಧಾನಮ್ ॥ ೨೭ ॥**

ಪ್ರಾಣಾಯಾಮ, ಪ್ರತ್ಯಾಹಾರ, ಜಪ, ಸಮಾಧಿ, ಇವುಗಳನ್ನು ಮಾಡು. ಭಗವಂತನಲ್ಲಿ ಮನಸ್ಸನ್ನು ನಿಲ್ಲಿಸು. ಮಹಾತ್ಮರು ಆದರಿಸಿದ ಪೂರ್ವಚರಿತೆ ಇದು.

**ಗುರುಚರಣಾಂಬುಜ – ನಿರ್ಭರಭಕ್ತಃ**
**ಸಂಸಾರಾದಚಿರಾದ್ಭವ ಮುಕ್ತಃ ।**
**ಸೇಂದ್ರಿಯಮಾನಸನಿಯಮಾದೇವಂ**
**ದ್ರಕ್ಷ್ಯಸಿ ನಿಜಹೃದಯಸ್ಥಂ ದೇವಮ್ ॥ ೨೮ ॥**

ಶ್ರೀ ಗುರುಚರಣಕಮಲದಲ್ಲಿ ದೃಢವಾದ ಭಕ್ತಿಯನ್ನಿಡು. ಆದಷ್ಟು ಬೇಗನೆ ಸಂಸಾರ ಬಂಧನದಿಂದ ಬಿಡುಗಡೆ ಹೊಂದು. ಇಂದ್ರಿಯಗಳನ್ನು ಮನಸ್ಸನ್ನು ಈ ಪ್ರಕಾರವಾಗಿ ನಿಗ್ರಹಿಸಿರು. ಶೀಘ್ರದಲ್ಲಿಯೇ ನಿನ್ನ ಹೃದಯದಲ್ಲಿಯೇ ಇರುವ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತೀಯೆ.

* * * * *

# ೬. ಷಟ್ಪದೀ ಸ್ತೋತ್ರಮ್

**ಅವಿನಯಮಪನಯ ವಿಷ್ಣೋ**
**ದಮಯ ಮನಃ ಶಮಯ ವಿಷಯಮೃಗತೃಷ್ಣಾಮ್ ।**
**ಭೂತದಯಾಂ ವಿಸ್ತಾರಯ**
**ತಾರಯ ಸಂಸಾರ ಸಾಗರತಃ ॥ ೧ ॥**

ಹೇ ಸ್ವಾಮಿ ಮಹಾ ವಿಷ್ಣುವೇ, ನನ್ನಲ್ಲಿರುವ ಅವಿನಯವೆಂಬ ದೋಷವನ್ನು ಹೋಗಲಾಡಿಸು. ನನ್ನ ಮನಸ್ಸನ್ನು ತಪ್ಪು ಮಾಡದಂತೆ ನಿಗ್ರಹಿಸು. ವಿಷಯ ಸುಖಗಳ ಅಭಿಲಾಷೆಯೆಂಬ ಮರುಮರೀಚಿಕೆಯನ್ನು ಹೋಗಲಾಡಿಸು. ಪ್ರಾಣಿಗಳಲ್ಲಿ ದಯೆಯಿರುವಂತೆ ನನ್ನ ಬುದ್ಧಿಯನ್ನು ವಿಸ್ತರಿಸು. ಸಂಸಾರಸಾಗರದಿಂದ ನನ್ನನ್ನು ಮೇಲಕ್ಕೆ ಎತ್ತಬೇಕೆಂದು ಬೇಡಿಕೊಳ್ಳುತ್ತೇನೆ.

**ದಿವ್ಯಧುನೀ ಮಕರಂದೇ**
**ಪರಿಮಲಪರಿಭೋಗಸಚ್ಚಿದಾನಂದೇ ।**
**ಶ್ರೀಪತಿಪದಾರವಿಂದೇ**
**ಭವಭಯಖೇದಚ್ಛಿದೇ ವಂದೇ ॥ ೨ ॥**

ದೇವನದಿಯಾದ ಗಂಗೆಯೆಂಬ ಮಕರಂದವನ್ನು ಸುರಿಸುತ್ತಿರುವ, ಪರಿಮಳಭೂಷಿತವೂ ಸಚ್ಚಿದಾನಂದ ಸ್ವರೂಪವೂ ಆದ ಮಹಾವಿಷ್ಣುವಿನ ಪಾದ ಪದ್ಮಗಳನ್ನು, ಸಂಸಾರದ ಭಯಶೋಕಗಳನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ವಂದಿಸುತ್ತೇನೆ.

**ಸತ್ಯಪಿ ಭೇದಾಪಗಮೇ**
**ನಾಥ ತವಾಹಂ ನ ಮಾಮಕೀನಸ್ತ್ವಮ್ ।**
**ಸಾಮುದ್ರೋ ಹಿ ತರಂಗಃ**
**ಕ್ವಚನ ಸಮುದ್ರೋ ನ ತಾರಂಗಃ ॥ ೩ ॥**

ಹೇ ಸ್ವಾಮಿ, ಪರಮಾರ್ಥದಲ್ಲಿ ನನಗೂ ನಿನಗೂ ಭೇದವಿಲ್ಲದಿದ್ದರೂ ನಾನು ನಿನ್ನವನೇ ಹೊರತು ನೀನು ನನ್ನವನಲ್ಲ! ಅಲೆಯು ಸಮುದ್ರಕ್ಕೆ ಸೇರಿದ್ದೇ ಹೊರತು ಸಮುದ್ರವು ಅಲೆಗೆ ಸೇರಿದ್ದಲ್ಲ!

**ಉದ್ಧೃತನಗ ನಗಭಿದನುಜ**
**ದನುಜಕುಲಾಮಿತ್ರ ಮಿತ್ರಶಶಿದೃಷ್ಟೇ ।**
**ದೃಷ್ಟೇ ಭವತಿ ಪ್ರಭವತಿ**
**ನ ಭವತಿ ಕಿಂ ಭವತಿರಸ್ಕಾರಃ ॥ ೪ ॥**

ಕೃಷ್ಣನಾಗಿ ಗಿರಿಯುನ್ನೆತ್ತಿದವನೆ, ವಾಮನನಾಗಿ ಇಂದ್ರನ ತಮ್ಮನೆನಿಸಿಕೊಂಡವನೆ, ರಾಮನಾಗಿ ರಾಕ್ಷಸಕುಲವನ್ನು ಸಂಹರಿಸಿದವನೆ, ಚಂದ್ರಸೂರ್ಯರನ್ನು ಕಣ್ಣಾಗಿ ಉಳ್ಳವನೆ! ಸರ್ವಶಕ್ತನಾದ ನಿನ್ನನ್ನು ನೋಡಿದ ಮೇಲೆ ಸಂಸಾರಬಂಧನವು ನಾಶವಾಗದೆ?

**ಮತ್ಸ್ಯಾದಿಭಿರವತಾರೈ**
**ರವತಾರವತಾಽವತಾ ಸದಾ ವಸುಧಾಮ್ ।**
**ಪರಮೇಶ್ವರ ಪರಿಪಾಲ್ಯೋ**
**ಭವತಾ ಭವತಾಪಭೀತೋಽಹಮ್ ॥ ೫ ॥**

ಪೃಥ್ವಿಯನ್ನು ಪಾಲಿಸುವುದಕ್ಕಾಗಿ ಮತ್ಸ್ಯ ಕೂರ್ಮಾದ್ಯವತಾರಗಳನ್ನು ಮಾಡಿದ ಕರುಣಾಳು ನೀನು.  ಹೇ ಪರಮೇಶ್ವರ, ನೀನು ನನ್ನನ್ನು ಪಾಲಿಸಬೇಕು. ನಾನು ಸಂಸಾರದ ಕಷ್ಟಗಳಿಗೆ ಹೆದರಿ ಹೋಗಿದ್ದೇನೆ.

**ದಾಮೋದರ ಗುಣಮಂದಿರ**
**ಸುಂದರವದನಾರವಿಂದ ಗೋವಿಂದ ।**
**ಭವಜಲಧಿಮಥನಮಂದರ**
**ಪರಮಂ ದರಮಪನಯ ತ್ವಂ ಮೇ ॥ ೬ ॥**

ಹೇ ದಾಮೋದರ, ಸದ್ಗುಣ ನಿಲಯ, ಸುಂದರವದನಾರವಿಂದ, ಗೋವಿಂದ, ಸಂಸಾರ ಸಾಗರವನ್ನು ಕಡೆದು ಹಾಕುವ ಮಂದರ ಪರ್ವತನೇ, ನನಗಾಗಿರುವ ಮಹತ್ತರವಾದ ಭಯವನ್ನು ಹೋಗಲಾಡಿಸು.

**ನಾರಾಯಣ ಕರುಣಾಮಯ**
**ಶರಣಂ ಕರವಾಣಿ ತಾವಕೌ ಚರಣೌ ।**
**ಇತಿ ಷಟ್ಪದೀ ಮದೀಯೇ**
**ವದನಸರೋಜೇ ಸದಾ ವಸತು ॥ ೭ ॥**

ಹೇ ನಾರಾಯಣ, ಕರುಣಾಮಯ, ನಿನ್ನ ಪಾದಕ್ಕೆ ಶರಣು ಹೋಗುತ್ತೇನೆ. ಈ ಪ್ರಕಾರವಾದ ಈ ಷಟ್‌ಪದಿಯು (ಆರು ಪದಗಳು ಅಥವಾ ಮೇಲಿನ ಆರು ಪದ್ಯಗಳು) ನನ್ನ ಮುಖಕಮಲದಲ್ಲಿ ಸದಾ ನೆಲೆಸಲಿ. (ಷಟ್‌ಪದೀ=ಆರು ಪದ್ಯಗಳು, ಹೆಣ್ಣು ದುಂಬಿ)

* * * * *

# ೭. ಪ್ರಾತಃಸ್ಮರಣಮ್

ಪ್ರಾತಃಸ್ಮರಾಮಿ ಹೃದಿ ಸಂಸ್ಫುರದಾತ್ಮತತ್ತ್ವಂ
ಸಚ್ಚಿತ್ಸುಖಂ ಪರಮಹಂಸಗತಂ ತುರೀಯಮ್ ।
ಯತ್ಸ್ವಪ್ನಜಾಗರ ಸುಷುಪ್ತಮವೈತಿ ನಿತ್ಯಂ
ತದ್ಬ್ರಹ್ಮನಿಷ್ಕಲಮಹಂ ನ ಚ ಭೂತಸಂಘಃ ॥ ೧ ॥

ನನ್ನ ಹೃದಯುದಲ್ಲಿ ಬೆಳಗುತ್ತಿರುವ ಸಚ್ಚಿದಾನಂದಸ್ವರೂಪವೂ ಪರಮಹಂಸರಾದ ಜ್ಞಾನಿಗಳಿಗೆ ಗಮ್ಯವೂ ಆದ ಶುದ್ಧ ಆತ್ಮ ತತ್ತ್ವವನ್ನು ಸ್ಮರಿಸಿಕೊಳ್ಳುತ್ತೇನೆ. ಅದು ಜಾಗ್ರತ್ ಸ್ವಪ್ನಸುಷುಪ್ತಿಗಳೆಂಬ ಅವಸ್ಥಾತ್ರಯಕ್ಕೆ ಸಾಕ್ಷಿಯಾದ ತುರೀಯವಸ್ತುವಾಗಿದೆ. ನಿತ್ಯವೂ ನಿರಂಜನವೂ ಆದ ಆ ಬ್ರಹ್ಮವೇ ನಾನು. ಪಂಚಭೂತಗಳ ಸಂಘಾತವಾದ ಈ ದೇಹವು ನಾನಲ್ಲ.

ಪ್ರಾತರ್ಭಜಾಮಿ ಮನಸಾ ವಚಸಾಮಗಮ್ಯಂ
ವಾಚೋ ವಿಭಾಂತಿ ನಿಖಿಲಾ ಯದನುಗ್ರಹೇಣ ।
ಯನ್ನೇತಿ ನೇತಿ ವಚನೈರ್ನಿಗಮಾ ಅವೋಚುಃ
ತದ್ಬ್ರಹ್ಮ ನಿಷ್ಕಲಮಹಂ ನ ಚ ಭೂತಸಂಘಃ ॥ ೨ ॥

ನನ್ನ ವಾಕ್ಕುಗಳಿಗೆ ಅಗೋಚರವೂ ಈ ಸರ್ವ ವಾಕ್ಕುಗಳೇ ಯಾವುದರ ಅನುಗ್ರಹದಿಂದ ಹೊರಬಂದು ಪ್ರಕಾಶಿಸುತ್ತವೆಯೋ ಅಂತಹ ಆತ್ಮಸ್ವರೂಪವನ್ನು, ಪ್ರಾತಃಕಾಲದಲ್ಲಿ ಭಜಿಸುತ್ತೇನೆ. ವೇದಗಳೇ ಯಾವ ಆತ್ಮನನ್ನರಿಯಲಾಗದೇ 'ನ–ನ' 'ಇದಲ್ಲ –ಇದಲ್ಲ' ಎಂದು ಮಾತ್ರ ಹೇಳಿರುತ್ತವೋ ಆ ಬ್ರಹ್ಮವೇ ನಾನು. ಅದು ಸರ್ವಗುಣಗಳಿಂದ ರಹಿತವಾದ ನಿರಂಜನ. ಆ ಬ್ರಹ್ಮವೇ ನಾನಾಗಿದ್ದೇನೆ. ಪಾಂಚಭೌತಿಕವಾದ ಜಡವಸ್ತು ನಾನಲ್ಲ.

ಪ್ರಾತರ್ನಮಾಮಿ ತಮಸಃ ಪರಮರ್ಕವರ್ಣಂ
ಪೂರ್ಣಂ ಸನಾತನಪದಂ ಪುರುಷೋತ್ತಮಾಖ್ಯಮ್ ।
ಯಸ್ಮಿನ್ನಿದಂ ಜಗದಶೇಷಮಶೇಷಮೂರ್ತೌ
ರಜ್ಜ್ವಾ ಭುಜಂಗಮ ಇವ ಪ್ರವಿಭಾಸಿತಂ ವೈ ॥ ೩ ॥

ತಮೋರೂಪವಾದ ಮಾಯೆಯ ಆಚೆಗಿದ್ದು ಸೂರ್ಯನಂತೆ ಜ್ವಲಿಸುತ್ತಾ ಪರಿಪೂರ್ಣವೂ ಶಾಶ್ವತವೂ ಪುರುಷೋತ್ತಮ ಎಂದು ಪ್ರಕಾಶಿಸುವ ಆತ್ಮನನ್ನು ಈ ಪ್ರಾತಃಕಾಲದಲ್ಲಿ ನಮಸ್ಕರಿಸುತ್ತೇನೆ. ಸರ್ವಮೂರ್ತ ವಸ್ತುವಿಗೆ ನೆಲೆಯಾದ ಯಾವ

ಆತ್ಮನಲ್ಲಿ ಈ ಸಮಸ್ತ ಜಗತ್ತೂ, ಹಗ್ಗದಲ್ಲಿ ಹಾವಿನಂತೆ ತೋರುತ್ತದೆಯೋ ಅಂತಹ ಶುದ್ಧಾತ್ಮನನ್ನು ವಂದಿಸುತ್ತೇನೆ.

**ಶ್ಲೋಕತ್ರಯಮಿದಂ ಪುಣ್ಯಂ ಲೋಕತ್ರಯ ವಿಭೂಷಣಮ್ ।**
**ಪ್ರಾತಃಕಾಲೇ ಸ್ಮರೇದ್ಯಸ್ತು ಸ ಗಚ್ಛೇತ್ ಪರಮಂ ಪದಮ್ ॥**

ಮೂರು ಲೋಕಗಳಿಗೆ ಅಲಂಕಾರಪ್ರಾಯವೂ ಪುಣ್ಯಕರವೂ ಆದ ಈ ಮೂರು ಶ್ಲೋಕಗಳನ್ನು ಪ್ರತಿದಿನ ಪ್ರಾತಃ ಕಾಲದಲ್ಲಿ ಯಾವಾತನು ಪಠಿಸುತ್ತಾನೋ ಆತನು ಪರಮ ಪದವಾದ ಮೋಕ್ಷವನ್ನು ಪಡೆಯುತ್ತಾನೆ.

* * * * *

# ಶ್ರೀಗುರುಪರಂಪರಾ ಸ್ತೋತ್ರಮ್

ನಾರಾಯಣಂ ಪದ್ಮಭುವಂ ವಸಿಷ್ಠಂ
ಶಕ್ತಿಂ ಚ ತತ್ಪುತ್ರಪರಾಶರಂ ಚ ।
ವ್ಯಾಸಂ ಶುಕಂ ಗೌಡಪದಂ ಮಹಾಂತಂ
ಗೋವಿಂದಯೋಗೀಂದ್ರಮಥಾಸ್ಯ ಶಿಷ್ಯಮ್ ॥ ೧ ॥

ಶ್ರೀ ಶಂಕರಾಚಾರ್ಯಮಥಾಸ್ಯ ಪದ್ಮ-
ಪಾದಂ ಚ ಹಸ್ತಾಮಲಕಂ ಚ ಶಿಷ್ಯಮ್ ।
ತಂ ತೋಟಕಂ ವಾರ್ತಿಕಕಾರಮನ್ಯಾನ್
ಅಸ್ಮದ್ ಗುರೂನ್ ಸಂತತಮಾನತೋಽಸ್ಮಿ ॥ ೨ ॥

**ಟಿಪ್ಪಣಿ:** ಪದ್ಮಭೂಃ = ಬ್ರಹ್ಮ, ಗೌಡಪದ = ಗೌಡಪಾದಾಚಾರ್ಯರು, ವಾರ್ತಿಕಕಾರ= ಶ್ರೀಸುರೇಶ್ವರಾಚಾರ್ಯರು, ಹಸ್ತಾಮಕಲಾಚಾರ್ಯರೇ ಮೊದಲಾದ ನಾಲ್ವರೂ ಶ್ರೀ ಶಂಕರಾಚಾರ್ಯರ ಶಿಷ್ಯರು.

* * * * *



ಪ್ರಾಚೀನಶಾಸ್ತ್ರಗಳಲ್ಲಿ ತಲಸ್ಪರ್ಶಿ ಪಾಂಡಿತ್ಯ, ಕಾಳಿದಾಸನ "ಹಳೆಯದೆಂಬ ಮಾತ್ರಕ್ಕೆ ಎಲ್ಲದೂ ಒಳ್ಳೆಯದಲ್ಲ, ಹೊಸದೆಂಬ ಮಾತ್ರಕ್ಕೆ ತ್ಯಾಜ್ಯವೂ ಅಲ್ಲ" ಎಂಬ ಅಭಿಪ್ರಾಯವನ್ನನುಸರಿಸಿ ಎಲ್ಲವನ್ನೂ ಪರೀಕ್ಷಿಸಿಯೇ ಸ್ವೀಕರಿಸುವ ಮನೋವೈಶಾಲ್ಯ, ಸಮತೂಕದ ಬರವಣಿಗೆ, ಶ್ರೋತೃಗಳ ಹೃದಯವನ್ನು ನೇರವಾಗಿ ತಲುಪುವ ವಾಗ್ಮಿತೆ, ಶಾಸ್ತ್ರಬೋಧನ ಪಾಟವ, ಸರಳತೆ ಸಜ್ಜನಿಕೆ ಇವೆಲ್ಲ ಒಟ್ಟಿಗೆ ಸೇರಿರುವ ಅಪರೂಪದ ವ್ಯಕ್ತಿ ಶ್ರೀ. **ಎನ್. ರಂಗನಾಥಶರ್ಮರು**. ಶಿವಮೊಗ್ಗ ಜಿಲ್ಲೆಯ ಸೊರಬ ಸಮೀಪದ ನಡಳ್ಳಿಯಲ್ಲಿ ಮಧ್ಯಮ ವರ್ಗದ ಕೃಷಿಕ ಕುಟುಂಬವೊಂದರಲ್ಲಿ ಶರ್ಮರ ಜನನ (1916). ಬಹು ಪರಿಶ್ರಮದಿಂದ ವಿದ್ಯಾರ್ಜನೆ ಮಾಡಿ ವ್ಯಾಕರಣ-ಅಲಂಕಾರ ಶಾಸ್ತ್ರಗಳಲ್ಲಿ ವಿದ್ವತ್ ಪದವಿಯನ್ನು ಪಡೆದ ಶರ್ಮರು ತಾವು ಓದಿದ ಬೆಂಗಳೂರಿನ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿಯೇ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು. ಸರಕಾರೀ ಸೇವೆಯಿಂದ ನಿವೃತ್ತರಾದರೂ ಸರಸ್ವತೀ ಸೇವೆಯಿಂದ ನಿವೃತ್ತರಾಗದೆ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಸಂಸ್ಕೃತ-ಕನ್ನಡ ಉಭಯಭಾಷೆಗಳಲ್ಲಿ ಸಿದ್ಧಹಸ್ತರಾದ ಶರ್ಮರು ಅರವತ್ತಕ್ಕೂ ಹೆಚ್ಚು ಗ್ರಂಥಗಳನ್ನು ಈ ಭಾಷೆಗಳಲ್ಲಿ ರಚಿಸಿದ್ದಾರೆ. ವಯಸ್ಸು ಹಾಗೂ ಅನಾರೋಗ್ಯ ಇವೆರಡರಿಂದಲೂ ದೇಹ ಜರ್ಜರಿತವಾಗಿದ್ದರೂ ಇಂದಿಗೂ ತರುಣರನ್ನು ನಾಚಿಸುವ ಉತ್ಸಾಹದಿಂದ ಬರವಣಿಗೆಯಲ್ಲಿ ತೊಡಗಿರುವ ಶರ್ಮರನ್ನು ನೋಡುವುದೇ ಒಂದು ಸಂತೋಷ-ಸೌಭಾಗ್ಯದ ವಿಷಯ. ವಿದ್ವತ್ಪ್ರಿಯ ಜನತೆಯಿಂದ ದೊರೆತ ಅನೇಕ ಪ್ರಶಸ್ತಿ-ಪುರಸ್ಕಾರಗಳಲ್ಲದೆ ಕೇಂದ್ರೀಯ ವಿದ್ಯಾಲಯ ತಿರುಪತಿ ಇದರ ಮಹಾಮಹೋಪಾಧ್ಯಾಯ ಪ್ರಶಸ್ತಿ, ಕೇಂದ್ರ ಸರಕಾರದ ರಾಷ್ಟ್ರಪತಿ ಪ್ರಶಸ್ತಿಗಳಿಗೆ ಇವರು ಭಾಜನರಾಗಿದ್ದಾರೆ.

**ಅನಂತಶರ್ಮಾ ಭುವನಗಿರಿ**